ಹೈದರಾಬಾದಿನ ವೀರ ಕನ್ನಡಿಗ

# ಬಿ. ಜಿ. ಚಿಮ್ಮಲಗಿ

ಶ್ರೀನಿವಾಸ ಹಾವನೂರ



ಹೈದರಾಬಾದಿನ ವೀರ ಕನ್ನಡಿಗ

# ಬಿ. ಜಿ. ಚಿಮ್ಮಲಗಿ



ಶ್ರೀನಿವಾಸ ಹಾವನೂರ



ವಿಜಯ ಪ್ರಕಾಶನ
೧೧೮೧, ಕೋನವಾಳಗಲ್ಲಿ, ಬೆಳಗಾವಿ.

HAVANUR SRINIVASA ; Hyderabadine Veera Kannadiga B. G. Chimmalagi Biography of Bhimacharya Chimmalagi a Kannada Philanthrophist who lived in Hyderabad (1889-1973) PP. 54 + ii. First Edition-1980.



*Published by :*

Sou. Vijaya Krishna Kulkarni
Vijaya Prakashana
1181, Konwal galli, Belgaum.

*Printed by :*

Sri. M. C. Kulkarni
Vijaylaxmi Art Printers, Belgaum.

Price Rs. **4-00**

# ಮೊದಲ ಮಾತು

ಮಿತ್ರರಾದ ಡಾ. ಶ್ರೀನಿವಾಸ ಹಾವನೂರ ಅವರು ದಿ. ಬಿ.ಜಿ. ಚಿಮ್ಮ ಗಿಯವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಒದಗಿಸಿ ಒಬ್ಬ ಸಾಹಸೀ ಕನ್ನಡಿ ನ ಕನ್ನಡ ಸೇವೆಯ ವಿವರಗಳನ್ನು ಬೆಳಕಿಗೆ ತಂದಿದ್ದಾರೆ. ಹೈದರಾಬಾದ್ ರ್ಣಾಟಕದಲ್ಲಿ ಮತ್ತು ಹೈದರಾಬಾದು ನಗರದಲ್ಲಿ ಈ ಶತಮಾನದಲ್ಲಾದ ನ್ನಡದ ಪುನರುಜ್ಜೀವನ ಮತ್ತು ಬೆಳವಣಿಗೆಗಳ ಇತಿಹಾಸವು ಶ್ರೀ ಚಿಮ್ಮಲಗಿ ಯವರ ಪಾತ್ರನಿರೂಪಣೆಯ ಈ ಪ್ರಕರಣವಿಲ್ಲದಿದ್ದರೆ ಅಪೂರ್ಣವಾಗುತ್ತಿತ್ತು. ದೈವದಿಂದ ಆ ಕೊರತೆ ಈಗ ಕೆಲಮಟ್ಟಿಗೆ ತುಂಬುವದೆಂದು ಸಮಾಧಾನ ಳಬಹುದು.

ಸಮಕಾಲೀನರು ಮತ್ತು ಸಹೋದ್ಯೋಗಿಗಳು ತಮ್ಮ ತಮ್ಮ ಅನು ಾಲದ ದೃಷ್ಟಿಯಿಂದ ಇಂಥ ಸಮಾಜಸೇವಕರ ಮತ್ತು ಭಾಷಾಸೇವಕರ ರ್ಯಗಳನ್ನು ಕೆಲವು ಸಲ ಕಡೆಗಣಿಸಿದರೆ, ಅನಂತರದ ಪೀಳಿಗೆಯವರು ುವಳಿಕೆಯ ಅಭಾವದಿಂದ ಇಂಥವರನ್ನು ಮರೆತುಬಿಡುತ್ತಾರೆ. ಇದೂ ಂದು ಬಗೆಯ ದುರಂತವೆ. ಶ್ರೀ ಬಿ. ಜಿ. ಚಿಮ್ಮಲಗಿಯವರು ಸಹ ಇಂಥ ರಂತಕ್ಕೆ ಹೊರತಾದವರಲ್ಲವೆಂದು ಅವರನ್ನು ಹತ್ತಿರದಿಂದ ನೋಡಿದ ನ್ನಂಥವರಿಗೆ ಅನಿಸುವದು ಸಹಜ.

೧೯೪೦ ರಿಂದ ೪೯ರ ಅವಧಿಯ ಒಂಭತ್ತು ವರ್ಷಗಳನ್ನು ವಿದ್ಯಾರ್ಥಿ ಾಗಿ ಹೈದರಾಬಾದಿನಲ್ಲಿ ಕಳೆದ ನನಗೆ ಆರಂಭದಿಂದಲೇ ಚಿಮ್ಮಲಗಿ ಭೀಮಾ ರ್ಯರ ಪರಿಚಯ ಹಾಗು ಸಂಬಂಧ ಬೆಳೆಯಿತು. ಆ ಹೊತ್ತಿಗಾಗಲೇ ಅವರು ಾಪಕಿಯಾಗಿ ಪ್ರಾರಂಭಿಸಿದ್ದ ನೃಪತುಂಗ ಶಾಲೆ, ಗಣೇಶೋತ್ಸವ, ನಾಡ ಬ್ಬ ಮುಂತಾದ ಕನ್ನಡ ಕೆಲಸಗಳೇ ನಮ್ಮನ್ನು ಆಕರ್ಷಿಸಲು ಕಾರಣ, ಅವರ ಾಮಕೋಟ್' ಮನೆಯಲ್ಲಿಯೇ ಜರುಗುತ್ತಿದ್ದ ಅನೇಕ ಉತ್ಸವಗಳಲ್ಲಿ, ಾಭಾಷಣ, ಪ್ರಬಂಧ ಲೇಖನ ಸ್ಪರ್ಧೆಗಳಲ್ಲಿ ನಾನು ಹಲವು ವರ್ಷಗಳ ಕಾಲ ಪ್ಪದೇ ಪ್ರಥಮ ಬಹುಮಾನಗಳನ್ನು ಅವರ ಕೈಯಿಂದಲೇ ಪಡೆಯುತ್ತಿದ್ದ

ನೆನಪು ಇನ್ನೂ ಹಸುರಾಗಿದೆ. ಇಂದು ಖ್ಯಾತ ನಾಮಕರಾಗಿ ಗೌರವನೀಯರಾದ ಕನ್ನಡ ಸಾಹಿತಿ ಹಿರಿಯರನೇಕರ ಪರಿಚಯವೂ ಅವರ ಮನೆಯಲ್ಲಿ ನನಗಾದು ದುಂಟು, ೧೯೪೩ ರಲ್ಲಿ ನಾನು ಅಧ್ಯಾಪಕನಾಗಿ ನೃಪತುಂಗ ಶಾಲೆಯನ್ನು ಸೇರಿದೆ.

ಆಗ ಕನ್ನಡ ಚಟುವಟಿಕೆಗಳ ಕೇಂದ್ರವೆಂದರೆ ಶ್ರೀ ಚಿಮ್ಮಲಗಿಯವರ ಮನೆ. ಕನ್ನಡ ಯುವಕರಿಗೆ ಆಶ್ರಯವೆಂದರೆ ನೃಪತುಂಗ ಶಾಲೆ. ಅರ್ಧನಿಂತ ಶಿಕ್ಷಣ ಮುಗಿಸಿ ಭವಿಷ್ಯವನ್ನರಸಲು ಮುಂದಕ್ಕೆ ಮತ್ತು ಎತ್ತರಕ್ಕೆ ಜಿಗಿದು ಹೋಗುವ ಕನ್ನಡ ತರುಣರಿಗೆ ಅದೊಂದು ಮುಖ್ಯ ಕೈಲಾಸರೆಯ ಮೆಟ್ಟಲಿ ನಂತಿತ್ತು. ಇಂದು ನಾಡಿನ ಬೇರೆ ಬೇರೆ ಕ್ಷೇತ್ರಗಳಲ್ಲಿ ಗಣ್ಯಸ್ಥಾನ ಗಳಿಸಿಕೊಂಡು ಹೆಸರು ಮಾಡಿದ ಅನೇಕ ಹೈದರಾಬಾದ ಭಾಗದ ಕನ್ನಡಿಗರು ಒಂದಿಲ್ಲೊಂದು ರೀತಿಯಲ್ಲಿ ಈ ನೃಪತುಂಗ ಶಾಲೆಯ ಮತ್ತು ಚಿಮ್ಮಲಗಿಯವರ ಸಂಪರ್ಕದಲ್ಲಿ ಬಂದಿದ್ದವರೆಂಬುದನ್ನು ಇಲ್ಲಿ ಸ್ಮರಿಸಬಹುದು.

ನಿಜಾಂ ಕರ್ನಾಟಕ ವಿದ್ಯಾರ್ಥಿ ಸೇವಾಸಂಘದ ಉಪಾಧ್ಯಕ್ಷನಾಗಿ ಮತ್ತು ಸಹಕಾರ್ಯದರ್ಶಿಯಾಗಿ ನನ್ನ ಮತ್ತು ಸಂಘದ ಇತರ ಮಿತ್ರರ ಸಂಬಂಧ ಕೆಲವು ಕಾಲ ಚಿಮ್ಮಲಗಿಯವರೊಂದಿಗೆ ಇನ್ನಷ್ಟು ಬೆಳೆಯಿತು. ಅವರು ನಮ್ಮ ಸಂಘಕ್ಕೆ, ಹಾಗೂ ನಮ್ಮದೇ ಆಗಿದ್ದ ಪದ್ಮಾ ಪ್ರಕಟನಾಲಯದ ಪ್ರಕಟನೆಗಳಿಗೆ ನೀಡುತ್ತಿದ್ದ ನೆರವಿನ ಪ್ರಸ್ತಾಪ ಈ ಪುಸ್ತಕದಲ್ಲಿ ಬಂದಿದೆ. ಅವರ ಕನ್ನಡದ ಕೆಚ್ಚಿಗೆ ನಿದರ್ಶನವಾಗಿ ಒಂದು ಮರಾಠಿ ನಾಟಕದ ಆನುಷಂಗಿಕ ಪ್ರಸ್ತಾಪ ಇಲ್ಲಿದೆ. ಆದರೆ ಆ ಪ್ರಸಂಗ ಅವರ ಮತ್ತು ಇತರ ಮುಖಂಡರ ಮನೋ ಭಾವದಲ್ಲಿಯ ಅಂತರವನ್ನು ತಿಳಿಯಪಡಿಸುವದಾದ ಕಾರಣ ಇಲ್ಲಿ ವಿವರಿಸು ವದು ಸೂಕ್ತ.

ಮರಾಠಿ ಭಾಷೆಯ ಸುಪ್ರಸಿದ್ಧ ನಾಟಕಕಾರ 'ಗಡಕರಿ' ಅವರ 'ಭಾವ ಬಂಧನ' ಎಂಬ ನಾಟಕವನ್ನು ವೈ. ಎಂ. ಸಿ. ಎ. ದಲ್ಲಿ ಪ್ರದರ್ಶಿಸುವ ಕಾರ್ಯ ಕ್ರಮ ಪ್ರಕಟವಾಗಿತ್ತು. ಈ ನಾಟಕದಲ್ಲಿ ಪತ್ನಿ ಕನ್ನಡತಿ, ಪತಿ ಮಹಾ ರಾಷ್ಟ್ರೀಯ. ಆತ “ಕನ್ನಡ ಮಾತಾಡಿದರೆ ಗಡಿಗೆ (ಮಡಕೆ) ಯಲ್ಲಿ ಹರಳು

ಹಾಕಿ ಅಲುಗಾಡಿಸಿದಂತೆ ಶಬ್ದವಾಗುತ್ತದೆ” ಎಂದು ತನ್ನ ಪತ್ನಿಗೆ ಹೇಳುವ ಮೂಲಕ ಕನ್ನಡಕ್ಕೆ ಉಪಹಾಸ ಮಾಡುತ್ತಾನೆ. ಈ ವಿಷಯ ಅದು ಹೇಗೋ ನಮಗೆಲ್ಲ ತಿಳಿಯಿತು. ಚಿಮ್ಮಲಗಿಯವರ ಸಲಹೆ ಕೇಳಿಯಾಯಿತು. ಪ್ರತಿಭಟನೆಗೆ ಪ್ರೋತ್ಸಾಹ ಸಿಕ್ಕಿತು. ಆ ಹೊತ್ತಿಗಾಗಲೇ ರಾಜಕೀಯದಲ್ಲಿ ಮುಂದಾಳುಗಳೆಂದು ಹೆಸರಾಗಿದ್ದ ಇತರ ಕನ್ನಡ ಮುಖಂಡರನ್ನೂ ಕೇಳಿದೆವು. ಅವರಿಂದ ನಿರೀಕ್ಷಿತ ಪ್ರತಿಕ್ರಿಯೆ ಬರಲಿಲ್ಲ. ಭಾಷಾಸಾಮರಸ್ಯದ ದೃಷ್ಟಿಯಿಂದ ಇಂಥ ಸಣ್ಣ ವಿಚಾರವನ್ನು ಬೆಳೆಸಬಾರದೆಂದು ನಮಗೇ ಬೋಧಿಸಲಾಯಿತು. ಬಹುಶಃ ತಮ್ಮ ಸ್ವಂತದ ರಾಜಕೀಯ ಸಾಮರಸ್ಯದ ದೃಷ್ಟಿಯಿಂದ ಆ ನಾಯಕರು ಆ ಮಾತು ಹೇಳಿದರೆಂದು ಕಾಣುತ್ತದೆ. ಅಂತೂ ಪ್ರತಿಭಟನೆಯ ತೀರ್ಮಾನವಾಗಿ ರಾತ್ರೋರಾತ್ರಿ ಪ್ರತಿಭಟನೆಯ ಕರೆ ನೀಡುವ ಹಸ್ತಪ್ರತಿಗಳನ್ನು ನಾಲ್ಕಾರು ಜನ ನಮ್ಮ ನಮ್ಮ ಮನೆಗಳಲ್ಲಿ ಕುಳಿತು ಬರೆದು ಬೆಳಗಾಗುವದರೊಳಗಾಗಿ ಬಹುಜನ ಕನ್ನಡಗರ ಮನೆಗಳ ಬಾಗಿಲು ಸಂದಿನಲ್ಲಿ ಹಾಕಿ ಬಂದೆವು. ಮರುದಿನ ಸಂಜೆ ನಾಟಕ ಪ್ರಾರಂಭವಾಗುವ ಹೊತ್ತಿಗೆ ವೈ. ಎಂ. ಸಿ. ಎ. ಕಾಂಪೌಂಡಿನಲ್ಲಿ ಸುಮಾರು ಸಾವಿರ ವಿದ್ಯಾರ್ಥಿಗಳು, ಕೆಲವು ಜನ ಹಿರಿಯರು ಸೇರಿದರು. ಚಿಮ್ಮಲಗಿಯವರಿಗೆ ಸ್ವಾಭಾವಿಕವಾಗಿ ಸಂತಸವಾಗಿತ್ತು. ಗಾಬರಿಗೊಂಡ ಮರಾಠಿಗರು ಅದನ್ನು ತೋರಗೊಡದೆ ಮುಂಚೂಣಿಯಲ್ಲಿದ್ದ ನಮ್ಮಲ್ಲಿಯ ಕೆಲವರೊಂದಿಗೆ ವಾದ, ಶಕ್ತಿ ಪ್ರದರ್ಶನದ ಬೆದರಿಕೆಯ ಮಾತನಾಡಿದರು. (ಶ್ರೀ ಕಠಾವಿ, ಕಾಗಲ್ ವೆಂಕಟೇಶ, ವಿ.ಎಚ್. ದೇಸಾಯಿ, ಎಸ್. ವೆಂಕಟೇಶ, ಗುರುರಾಜ-ಗೋಪಾಲರಾವ್‌ಕಟ್ಟಿ–ನಾನು ಮತ್ತಿತರರು ಮುಂದಿದ್ದವರು) ಇಷ್ಟು ಮಾತು ನಡೆಯುವಾಗಲೇ ಕೆಲವು ಕನ್ನಡ ತರುಣರು ಕೈಯಲ್ಲಿ ಕಲ್ಲು ಹಿಡಿದುದನ್ನು ಕಂಡ ಹಿರಿಯ ಅಧಿಕಾರಿಯೊಬ್ಬರು (ವಿಠ್ಠಲರಾವ್ ರಠಕಲ್‌ಕರ್) ವಿವೇಕವರ್ಧಿನಿ ಹೈಸ್ಕೂಲಿನ ಪ್ರಮುಖರನ್ನು ಕರೆತಂದು ನಮ್ಮ ಬೇಡಿಕೆಯೇನೆಂದು ಕೇಳಿದರು. ಭಾಷಾಬಾಂಧವ್ಯದ ದೃಷ್ಟಿಯಿಂದ ಆಕ್ಷೇಪಾರ್ಹ ಭಾಗವನ್ನು ನಾಟಕದಲ್ಲಿ ಬಳಸಬಾರದೆಂಬುದೇ ನಮ್ಮ ಬೇಡಿಕೆಯಾಗಿತ್ತು. ಅದಕ್ಕೆ ಅವರು ಒಪ್ಪಿ ತಮ್ಮವರಿಗೂ ಅದರಂತೆ ಸೂಚನೆ ನೀಡಿ ಅದರ ನಿರೀಕ್ಷಣೆಗಾಗಿ ನಮ್ಮಲ್ಲಿಯ ಕೆಲವರನ್ನು ಥೇಟರಿನೊಳಗೆ ಪುಕ್ಕಟೆಯಾಗಿಬಿಟ್ಟರು. ಹೀಗೆ ಪರಿಸ್ಥಿತಿ ವಿಕೋಪಕ್ಕೆ ಹೋಗದೆ ಶಾಂತವಾಯಿತು. ಚಿಮ್ಮಲಗಿಯವರಿಗೆ

ಆದ ಸಮಾಧಾನ ಅಷ್ಟಿಷ್ಟಲ್ಲ. ಏನು ಮಹಾಸಾಧನೆ? ಎನಿಸಿದ್ದೀತು ಹಲವು ಜನ ನಮ್ಮ ಮುಖಂಡರಿಗೆ. ಅದು ಅವರ ದೃಷ್ಟಿ. ಅದೇ ಅವರ ಮತ್ತು ಚಿಮ್ಮಲಗಿಯಂಥವರ ದೃಷ್ಟಿಕೋನಗಳಲ್ಲಿ ಇರುವ ವ್ಯತ್ಯಾಸವೂ ಹೌದು.

ಶ್ರೀ ಚಿಮ್ಮಲಗಿ ಭೀಮಾಚಾರ್ಯರು ಇಂಗ್ಲಿಷ್ ಓದಿದವರಾಗಿರಲಿಲ್ಲ. ನಿಜ. ಆದರೆ ವಿಜಾಪುರ ಜಿಲ್ಲೆಯ ಯಾವುದೋ ಹಳ್ಳಿಯಲ್ಲಿ ಹುಟ್ಟಿ ಬೆಳೆದು ಎಲ್ಲೆಲ್ಲೋ ನೆಲೆಯಿಲ್ಲದೆ ಸುತ್ತಾಡಿ, ಪೋಲೀಸ್ ಪೇದೆಯಾಗಿ, ಫೋಟೋ ಗ್ರಾಫರ್ ಆಗಲು ಹೋಗಿ ಅದರ ಸಾಮಗ್ರಿಗಳ ವ್ಯಾಪಾರ, ಪುಸ್ತಕಗಳ ವ್ಯಾಪಾರ ಆರಂಭಿಸಿ ಅನಾಮಧೇಯರಾಗಿ ಬಂದು ಹೈದ್ರಾಬಾದ ಸೇರಿದವರು ಮುಂದೆ ಖ್ಯಾತನಾಮರಾದರು. ಜೀವನದಲ್ಲಿ ಸಾಹಸಪೂರ್ಣವಾದ ಪ್ರಯತ್ನ ದಿಂದ ಯಾವ ಸುಶಿಕ್ಷಿತರೂ ತಲೆದೂಗುವಂಥ ವ್ಯವಹಾರಕೌಶಲ, ಆರ್ಥಿಕ ಯಶಸ್ಸು, ಸಮಾಜಸೇವೆ. ಭಾಷಾಸೇವೆಗಳನ್ನು ಸಾಧಿಸಿ ತೋರಿಸಿದರು. ಬಹುಶಃ ಅದೇ ಹಲವರ ನಿಷ್ಕಾರಣವಾದ ತಲೆಶೂಲಿಗೂ ಕಾರಣವಾಗಿ ತ್ತೇನೋ.

ಹೈದ್ರಾಬಾದಿನಲ್ಲಿ ಕನ್ನಡದ ಹೆಸರೇ ಇಲ್ಲದಿದ್ದಾಗ ನೃಪತುಂಗ ಶಾಲೆ, ಕರ್ನಾಟಕ ಸಾಹಿತ್ಯ ಮಂದಿರ, ನಾಡಹಬ್ಬಗಳ ಏರ್ಪಾಡು, ಇಂಥವನ್ನೆಲ್ಲ ಆರಂಭಿಸಿ, ಬೆಳೆಸಿ ಕನ್ನಡಕ್ಕೆ ನೆಲೆ ಕಟ್ಟಿಸಿದುದಲ್ಲದೆ, ಕನ್ನಡಿಗರಲ್ಲಿ ಜಾಗ್ರುತಿ ಯುಂಟಾಗುವಂತೆ ಮಾಡಿದ ಕೀರ್ತಿ ಮೊದಲು ಚಿಮ್ಮಲಗಿಯವರಿಗೆ ಸಲ್ಲುತ್ತದೆ. ಭಾಷೆ ಮತ್ತು ಭಾಷಾಸಂಸ್ಥೆಗಳ ಮೂಲಕ ರಾಜಕೀಯ ವೇದಿಕೆಯ ಲಾಭ ಸಿಗುವದೆಂದು ಖಾತ್ರಿಯಾದ ಮೇಲೆ ರಾಜಕೀಯ ಮುಖಂಡರು ಇಂಥ ಸಂಸ್ಥೆ ಗಳಲ್ಲಿ ತೂರಿಕೊಳ್ಳುವದು ಸಹಜ. ಇಲ್ಲಿಯೂ ಹಾಗೇ ಆಯಿತೆಂದು ಹೇಳು ವದು ತೀರ ಕಟುವಾದೀತು. ನಮ್ಮ ಭಾಗದ ರಾಜಕೀಯ ಮುಖಂಡರಿಗೂ ಕನ್ನಡದ ಕಳಕಳಿ ಇತ್ತೆಂದು ನಂಬೋಣ. ಅದಕ್ಕೆಂದೇ ಆ ಹಿರಿಯರು ಈ ಸಂಸ್ಥೆಗಳನ್ನು ವಹಿಸಿಕೊಂಡ ಮೇಲೆ ಅವನ್ನು ಬೆಳಸಲು ತಮಗೆ ತಿಳಿದಂತೆ ಪ್ರಯತ್ನ ಮಾಡಿದರು-ಬೆಳೆಸಿದರು. ಆದರೆ ಹೈದ್ರಾಬಾದಿನಲ್ಲಿ ಕನ್ನಡದ ಬುನಾದಿಯನ್ನು ಹಾಕಿ ಕಾಯಾ, ವಾಚಾ, ಮನಸಾ ಮತ್ತು ಆರ್ಥಿಕವಾಗಿ ಈ ಎಲ್ಲ ಮುಖಂಡರಿಗಿಂತ ಒಂದು ಕೈ ಮೇಲಾಗಿ, ಈಚಿನವರಿಗಿರುವ ಸೌಲಭ್ಯಗಳು

ಇಲ್ಲದಿದ್ದಾಗ ಹೆಣಗಿ, ಕಾರ್ಯಸಾಧಿಸಿದ್ದ ಭೀಮಾಚಾರ್ಯ ಚಿಮ್ಮಲಗಿಯವರೊಂದಿಗೆ ಹಿರಿಯರು ನಡೆದುಕೊಂಡ ರೀತಿ ಮಾತ್ರ ಸಮರ್ಪಕವೆಂದು ಹೇಳಲಾಗುವದಿಲ್ಲ. ಅದಕ್ಕೇ ದೊಡ್ಡವರ ಸಣ್ಣತನವೆನ್ನದೇ ವಿಧಿಯಿಲ್ಲ. ರಾಜಕಾರಣಿಗಳ ಜಾತಿಯೇ ಹಾಗೇನೋ ಆಲದ ಮರದ ಹಾಗೆ. ಹತ್ತಿರ ಬೇರೇನನ್ನೂ ಬೆಳೆಯಗೊಡುವದಿಲ್ಲ.

ಡಾ. ಹಾವನೂರ ಅವರು ಈ ಪುಸ್ತಕದ ಕೊನೆಯಲ್ಲಿ ಕನ್ನಡ ಕುಲ ಪುರೋಹಿತ ಆಲೂರ ವೆಂಕಟರಾಯರಿಗೂ ಇಂಥದೇ ಸ್ಥಿತಿಯೊದಗಿದ ಸಂದರ್ಭ ವಿವರಿಸಿ ಶ್ರೀ ಚಿಮ್ಮಲಗಿಯವರಿಗೂ ಹಾಗಾದುದರಲ್ಲಿ ಆಶ್ಚರ್ಯವಿಲ್ಲವೆಂದು ಸೂಚಿಸಿದಂತಿದೆ.

ಇಂಥವರನ್ನು ನಾವು ನಮ್ಮ ಜನ ಅವರ ಅಂತಿಮ ದಿನಗಳಲ್ಲಿ ಈ ರೀತಿ ಕಂಡೆವಲ್ಲ ಎಂದು ನಾವೇ ಪರಿತಪಿಸಿ ಪರಿಮಾರ್ಜನೆ ಮಾಡಿಕೊಳ್ಳಬೇಕೇ ವಿನಾ, ಆಲೂರು ಮತ್ತು ಚಿಮ್ಮಲಗಿಯವರಂಥವರು ಕನ್ನಡದ ಏಳಿಗೆಗೆ ತಮ್ಮಪಾಲಿನ ಸೇವೆ ಸಲ್ಲಿಸಿಯಾಯಿತೆಂದು ಸಂತೃಪ್ತಿ ಹೊಂದುವವರೇ ವಿನಾ ತಮಗೆ ಲೌಕಿಕ ಮನ್ನಣೆ ಸಿಗಲಿಲ್ಲವೆಂದು ಮರುಗುವವರಲ್ಲ.

ಇತಿಹಾಸದ ಸರಪಳಿಯನ್ನು ಸರಿಯಾಗಿ ಜೋಡಿಸುವ ಇಂಥ ಉಪಯುಕ್ತ ಕೃತಿಯನ್ನು ನೀಡಿದ ಸಂಶೋಧಕ ಮಿತ್ರ ಡಾ. ಹಾವನೂರ ಅವರಿಗೆ ಅಭಿನಂದನೆ ಸಲ್ಲಿಸುತ್ತೇನೆ. ಈ ಕೃತಿಗೆ ಮೊದಲ ಮಾತು ಬರೆಯಲು ನನ್ನ ಅರ್ಹತೆಯನ್ನು ಗುರುತಿಸಿದ ಅವರಿಗೆ ಕೃತಜ್ಞನಾಗಿದ್ದೇನೆ. ಇದು ಆ ಹಿರಿಯ ಜೀವ ಚಿಮ್ಮಲಗಿಯವರಿಗೆ ನನ್ನ ವಿನಮ್ರ ಕಾಣಿಕೆ.

ಬೆಂಗಳೂರು
ಡಿಸೆಂಬರ ೧೯೭೪

**ಜಯತೀರ್ಥ ರಾಜಪುರೋಹಿತ,**
ಐ.ಎ.ಎಸ್.

# ಪ್ರಕಾಶಕರ ಮಾತು

ದಾಸ ಸಾಹಿತ್ಯದ ಕಿರುಹೊತ್ತಿಗೆಗಳನ್ನು ತರಬೇಕೆಂಬ ಉದ್ದೇಶದಿಂದ ನಮ್ಮ ಪ್ರಕಾಶನ ರೂಪಗೊಂಡು ಮೂರು ತಿಂಗಳ ಹಿಂದೆ 'ದಾಸ-ಮಹಿಪತಿ' ಕಾಖಂಡಕಿಯ ಹರಿದಾಸರಾದ ಶ್ರೀ ಮಹಿಪತಿದಾಸರ ಕುರಿತು ರೂಪಕವನ್ನು ಪ್ರಕಟಿಸಿದೆವು. ಕನ್ನಡಿಗರು ಅದನ್ನು ತುಂಬ ಆತ್ಮೀಯವಾಗಿ ಬರಮಾಡಿ ಕೊಂಡುದು ಸಂತೋಷದ ವಿಷಯ.

ಹಿತೈಷಿಗಳ ಅಭಿಲಾಷೆಯಂತೆ ಪ್ರಕಾಶನವನ್ನು ದಾಸ-ಸಾಹಿತ್ಯಕ್ಕೆ ಸೀಮಿತ ಗೊಳಿಸದೆ ಸಂಶೋಧನೆ ಹಾಗು ಸಂಶೋಧಕರು, ಕನ್ನಡ ನಾಡು ನುಡಿಗಳ ಅಭಿವೃದ್ಧಿಗೆ ಕಾರಣರಾದವರ ಪರಿಚಯ ಇತ್ಯಾದಿ ವಿಷಯಗಳನ್ನೂ ಈ ಮಾಲೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಅದರ ಅಂಗವಾಗಿ ಇದೀಗ ವಿಜಯ ಪ್ರಕಾಶನದ ಎರಡನೆಯ ಕುಸುಮ 'ಹೈದರಾಬಾದಿನ ವೀರ ಕನ್ನಡಿಗ ಬಿ.ಜಿ. ಚಿಮ್ಮಲಗಿ' ಹೊರಬರುತ್ತಿದೆ. ಇದನ್ನು ಬರೆದವರು ನಾಡಿನ ಖ್ಯಾತ ಸಂಶೋಧಕರಾದ ಡಾ। ಶ್ರೀನಿವಾಸ ಹಾವನೂರರು. ಅವರಿಗೆ ನಾವು ಕೃತಜ್ಞರು.

ಸುಂದರವಾಗಿ ಮುದ್ರಿಸಿದ ವಿಜಯಲಕ್ಷ್ಮಿ ಆರ್ಟ ಪ್ರಿಂಟರ್ಸದವರನ್ನೂ, ಮುಖಚಿತ್ರದ ಪಡಿಯಚ್ಚನ್ನು ಒದಗಿಸಿದ ಕಸ್ತೂರಿಯ ಸಂಪಾದಕರು ಹಾಗು ಕಲಾವಿದ ಶ್ರೀ ಕೆ. ಬಿ. ಕುಲಕರ್ಣಿ ಅವರನ್ನೂ ಇಲ್ಲಿ ಸಂತೋಷದಿಂದ ನೆನೆಸುತ್ತೇವೆ.

ಅಕ್ಷಯ್ಯ ತೃತೀಯಾ — ಪ್ರಕಾಶಕರು
೧೭–೪–೮೦
ಬೆಳಗಾವಿ.

# ಲೇಖಕರ ಎರಡು ಮಾತು

ಶ್ರೀ ಬಿ. ಜಿ. ಚಿಮ್ಮಲಗಿಯವರ ವೈಯಕ್ತಿಕ ಪರಿಚಯು ನನಗಿರಲಿಲ್ಲ, ಆದರೆ ಅವರು ತಮ್ಮ ಇತಿ ವೃತ್ತಾಂತವನ್ನು ಟಿಪ್ಪಣಿ ರೂಪದಲ್ಲಿ ಬರೆದಿಟ್ಟಿದ್ದ ಕಾಗದಗಳ ಕಟ್ಟು ಸಿಕ್ಕಿತು. ಜೊತೆಗೆ ಅವರನ್ನು ಬಲ್ಲ ಅನೇಕ ಜನ ಹಿರಿಯು ರನ್ನು ಭೆಟ್ಟಿಯಾಗಿ ಮಾಹಿತಿ ಸಂಗ್ರಹಿಸಿದ ಆಧಾರದ ಮೇಲೆ ಇದನ್ನು ಬರೆದೆ. ವಿಶೇಷತಃ ಅವರ ಮಗ ರಾಘವೇಂದ್ರರಿಂದ ಸಾಕಷ್ಟು ಸಹಾಯವನ್ನು ಪಡೆದ ದ್ದಾಗಿದೆ.

'ಕಸ್ತೂರಿ'ಯಲ್ಲಿ ಸಂಗ್ರಹರೂಪವಾಗಿ ಇದು ಮೊದಲು ಪ್ರಕಟವಾ ಯಿತು. ಇಡಿಯದನ್ನು ಆದಾರು ಪ್ರಕಟಿಸಿಯಾರು ಎಂದು ಯೋಚನೆಯಲ್ಲಿ ದ್ದಾಗ ನಮ್ಮ 'ಕುಲಕೃಷ್ಣರು' ಖುಶಿಯಿಂದ ಮುಂದೆ ಬಂದರು. ಈ ಪುಸ್ತಕ ಹೀಗೆ ರೂಪುಗೊಂಡು ನಿಮ್ಮ ಕೈಸೇರುತ್ತಲಿದೆ.

ಮೊದಲ ಮಾತನ್ನು ಬರೆದು ಪುಸ್ತಕದ ಶೋಭೆಯನ್ನು ಹೆಚ್ಚಿಸಿದ ಶ್ರೀ ಜಯತೀರ್ಥ ರಾಜಪುರೋಹಿತರನ್ನು ಇಲ್ಲಿ ನೆನೆಯುವೆ.

ಶ್ರೀ. ಹಾ

ಟಾಟಾ ಇನ್ಸ್ಟಿಟ್ಯೂಟ್ ಆಫ್
ಫಂಡಮೆಂಟಲ್ ರಿಸರ್ಚ
ಮುಂಬಯಿ-೪೦೦ ೦೦೫.

# ಶ್ರೀ. ಹಾ. ಕೃತಿಗಳು

**ಪ್ರಕಟಿತ :**

ಅವರು ಮತ್ತು ದೇವಕ್ಕ
ಕಾಗೆಗೆ ಹೇಳಿದ ಕತೆ
ಇತಿಹಾಸ ಸಂಶೋಧಕ ರಾಜಪುರೋಹಿತ
ಗೋವಿಂದ ಪೈ ವಾಙ್ಮಯ ದರ್ಶನ
ಗಳಗನಾಥ ಮಾಸ್ತರರು
ಹೊಸಗನ್ನಡದ ಅರುಣೋದಯ, ಇತ್ಯಾದಿ

**ಬರಲಿವೆ :**

ಕುಚೋದ್ಯದ ಕಥೆಗಳು
ಕಾದಂ—ಕಥನಗಳು
ಕನ್ನಡ ವಾಙ್ಮಯ ಸಮೀಕ್ಷೆ
ಫ್ಲೀಟರ ಸಮಗ್ರ ಲಾವಣಿ
ಪೂಜಾರ ಲೇಖನ ಸಮುಚ್ಚಯ
ಕಡಲಾಚೆಯ ಕನ್ನಡ ಸಂಪತ್ತು

ಇದನ್ನು ಬರೆಯುವ ಕಾಲಕ್ಕೆ
ದಿ. ೨೭ ಮೇ ೧೯೭೯ ರಂದು
ಅಸು ನೀಗಿದ ನನ್ನ ತಾಯಿಗೆ

ಶ್ರೀ. ಹಾ.

## ಹೈದರಾಬಾದಿನ ವೀರ ಕನ್ನಡಿಗ

# ಬಿ. ಜಿ. ಚಿಮ್ಮಲಗಿ

### ೧

ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಹೈದರಾಬಾದಿನಲ್ಲಿ ಇತರ ಭಾಷಿಕರು ಕನ್ನಡವನ್ನು ಮೂಲೆಗೊತ್ತಿದಾಗ ಹೋರಾಡಿ, ಆ ನಗರದಲ್ಲಿ ಕನ್ನಡವನ್ನು ನೆಲೆಗೊಳಿಸಿದ ಭೀಮಾಚಾರ್ಯ ಚಿಮ್ಮಲಗಿಯವರ ಚರಿತ್ರೆಯಿದು. ಕಡು ಬಡತನದ ವಿರುದ್ಧವೂ ಅವರು ಹೋರಾಡಬೇಕಾಗಿ ಬಂದಿತು. ಹೈಸ್ಕೂಲು ಮಟ್ಟದವರೆಗಾದರೂ ಇಂಗ್ಲಿಶ್ ಶಿಕ್ಷಣವನ್ನು ಪಡೆಯಬೇಕೆಂದಿದ್ದರು. ಅದು ಕೈಗೂಡದಿದ್ದಾಗ ವ್ಯಾಪಾರೀ ರಂಗದಲ್ಲಿ ಕಾಲಿರಿಸಿದರು— ಬಂಡವಲಿನ ಯಾವ ಬೆಂಬಲವೂ ಇಲ್ಲದೆ ಕೇವಲ ಕಾರ್ಯಶ್ರದ್ಧೆಯ ನೆರವಿನಿಂದ ಅದರಲ್ಲಿ ಯಶಸ್ವಿಯಾದರು. ಮಹತ್ವದ್ದೆಂದರೆ ಗಳಿಸಿದ ಸಂಪತ್ತಿನ ಬಹುಭಾಗವನ್ನು ಕನ್ನಡದ ಅಭಿವೃದ್ಧಿಗಾಗಿ ವ್ಯಯಿಸಿದರು. ಹದವಾದ ಭೂಮಿಯಲ್ಲಿ ಹೆಚ್ಚಿನ ಫಸಲನ್ನು ಪಡೆಯುವುದಕ್ಕೆ ಪರಿಶ್ರಮ ಬೇಕೇಬೇಕು. ಆದರೆ ಬಂಜರು ಭೂಮಿಯಲ್ಲಿ ಸಸಿಯನ್ನು ನೆಟ್ಟು ಪೋಷಿಸಿಕೊಂಡು ಬರುವುದಕ್ಕೆ ಅದಕ್ಕೂ ಹೆಚ್ಚಿನ ಪರಿಶ್ರಮ ಬೇಕಾಗುತ್ತದೆ. ಹೈದರಾಬಾದಿನಲ್ಲಿ ಚಿಮ್ಮಲಗಿಯವರ ಕನ್ನಡ ಸಾಧನೆ ಈ ಬಗೆಯದು.

ಚಿಮ್ಮಲಗಿಯವರು ಹುಟ್ಟಿ ಬೆಳೆದದ್ದು ಗುಳೇದಗುಡ್ಡದಲ್ಲಿ. (ಜನನ, ೧೮೮೯). ಅವರದು ಏಳು ಜನ ಒಡಹುಟ್ಟಿದವರಿದ್ದ, ನಿತ್ಯ ಬಡತನದ ಬ್ರಾಹ್ಮಣ ಮನೆತನ. ಯಾರದೋ ಅನುಕೂಲವಂತರ ಮನೆಯಲ್ಲಿ ನಡೆದ ಉಪನಯನದ ಕಾಲಕ್ಕೆ ಈ ಭೀಮನದೂ ಜರುಗಿತು. ಪಾಟಿ--ಪೆನ್ಸಿಲುಗಳಿಗೆ ಬೇಕಾಗುವ ಅಲ್ಪ ಹಣವನ್ನು ಸಹ ಒದಗಿಸಲಾರದಷ್ಟು, ತಂದೆಯ ಆರ್ಥಿಕ ಸ್ಥಿತಿಗತಿ. ಆದರೆ ಈ 'ಮುಂಜಿವೆ ಮಣಿ'ಗೆ ಆಗಾಗ ಊಟದ ಆಮಂತ್ರಣ ಬಂದು, ದಕ್ಷಿಣೆಯ ರೂಪದಲ್ಲಿ ಪುಡಿಕಾಸು ಸಿಗುತ್ತಿತ್ತು. ಹಾಗೆ ಬಂದದ್ದನ್ನು

ಕೂಡಿಡಲು ತಂದೆ ಒಂದು ಡಬ್ಬಿಯನ್ನು ಮಾಡಿಕೊಟ್ಟಿದ್ದರಂತೆ. ಅದರಲ್ಲಿ ಜಮೆಯಾದ ಹಣದಿಂದಲೇ ಭೀಮನ ಚಿಲ್ಲರೆ ವೆಚ್ಚ ಸಾಗಬೇಕು. ದುಡ್ಡಿನ ಅಡಚಣೆಯಿಂದಾಗಿ ತಂದೆ ಈ ವ್ಯವಸ್ಥೆ ಮಾಡಿದ್ದರೆ. ಇವನಿಗೆ ಅದು ಮಿತ ವ್ಯಯದ ಒಂದು ಪಾಠವಾಗಿ ಪರಿಣಮಿಸಿತು !

ಭೀಮನು ಪ್ರಾಥಮಿಕ ಶಾಲೆಯಲ್ಲಿ ಕಲಿಯುತ್ತಿದ್ದಾಗ ಓರ್ವ ಬಣಜಿಗರ ಹುಡುಗ ಇವನ ಸಹಪಾಠಿಯಾಗಿದ್ದ. ಅವನ ಮನೆಯಲ್ಲಿ ತಾಯಿ, ಮಗ ಇಬ್ಬರೇ. ಗಳಿಸುವ ಯಜಮಾನ ತೀರಿಹೋಗಿದ್ದನೆಂದು, ತಾಯಿ ಕೂಲಿಯ ಕೆಲಸ ಮಾಡುತ್ತಿದ್ದಳು. ಮಗ ಸಂತೆಯಲ್ಲಿ ಕಡ್ಡಿಪೆಟ್ಟಿಗೆ ಮಾರಿ, ಕಿಂಚಿತ್ ಗಳಿಸುತ್ತಿದ್ದ. ಆರ್ಥಿಕವಾಗಿ ತನ್ನ ಪರಿಸ್ಥಿತಿಯಾದರೂ ಅದೇ ಎಂದು ಕಂಡು ಕೊಂಡಿದ್ದ ಭೀಮ ತಾನೂ ಸಂತೆಯ ದಿವಸ ಹಾಗೆ ಮಾಡಲು ನಿರ್ಧರಿಸಿದನು. ಒಂದು ಬಿಲ್ಲಿಗೆ ಕೀಲಿಕೈ ಛಾಪಿನ ೩ ಪೆಟ್ಟಿಗೆಗಳು ! ಎರಡು ಡಜನ್ ಪೆಟ್ಟಿಗೆ ಕೊಂಡು, ಬಿಲ್ಲಿಗೆ ಎರಡರಂತೆ ಮಾರಾಟ ಮಾಡತೊಡಗಿದನು. ಭೀಮನಿಗೆ ಆಗ ೯ ವರ್ಷ.

ತಂದೆಗೆ ಈ ವಿಷಯ ತಿಳಿದಾಗ, ಚೆನ್ನಾಗಿ ಬೈದರು. ವೈದಿಕ ಬ್ರಾಹ್ಮಣರ ಹುಡುಗ ; ಈ ಧಂದೆ ಮಾಡುವುದೆ ? ಆದರೇನು ಇಂಥ ಕೆಲಸದಿಂದ ವಾರಕ್ಕೆ ಸಿಗುವ ೩–೪ ಆಣೆಯನ್ನು ಬಿಟ್ಟುಕೊಡಲು ಭೀಮನು ಸಿದ್ಧನಿದ್ದಿಲ್ಲ. ತುಸು ದೊಡ್ಡವನಾದ ಮೇಲೆ ಗುಳೇದಗುಡ್ಡದ ಸಂತೆಯಲ್ಲಿ ಮುದ್ದೇಬಿಹಾಳ ಪಂಚಾಂಗ, ಪಾಕೆಟ್ ಡೈರಿ. ಸೀಸಕಡ್ಡಿಗಳ ಮಾರಾಟವನ್ನು ಮಾಡ ತೊಡಗಿದನು.

ಗುಳೇದಗುಡ್ಡದಲ್ಲಿಯ ಪ್ರಾಥಮಿಕ ಶಿಕ್ಷಣ ಮುಗಿಯುತ್ತ ಬಂದಿತ್ತು. ಇತರ ಕೆಲವು ಜೊತೆಗಾರರಂತೆ ಭೀಮನು ತಾನೂ ಇಂಗ್ಲಿಶ್ ಶಾಲೆಗೆ ಹೋಗ ಬೇಕು ಎಂದು ಆಶಿಸಿದ. ಅದಕ್ಕಾಗಿ ಬಾಗಿಲುಕೋಟೆಗೆ ಹೋಗಬೇಕಿತ್ತು. ಅದಕ್ಕೆ ತಂದೆಯನ್ನು ಕೇಳಿದಾಗ "ದುಡ್ಡು ಎಲ್ಲಿಂದ ತರೋಣ ? ಪೌರೋಹಿತ್ಯವನ್ನು ಕಲಿ ; ಸಾಕು" ಎಂದರು. ಮನೆಯಲ್ಲಿ ಇನ್ನೂ ಹಲವಾರು ಬಾಯಿಗಳಿಗೆ ಆಹಾರವನ್ನು ಪೂರೈಸಬೇಕಾಗಿದ್ದ ಆ ತಂದೆ ಇನ್ನೇನು ಹೇಳಿ

ಯಾರು ? ಮುಂದಕ್ಕೆ ಓದಬೇಕು, ಎನ್ನುವ ಭೀಮನ ಆಸೆಗೆ ಮಣ್ಣು ಹೊಯ್ದಂತಾಯಿತು. ಇಂಗ್ಲೀಶ್ ಕಲಿಯಲು ಬೇರೆ ಊರಿಗೆ ಹೋದರೆ ಹೇಗೆ?

ಭೀಮನ ತಾಯಿಯ ತವರಿನವರು ಇದ್ದ ಸಿಂಧನೂರಲ್ಲಿ ರಾಮದೇವರ ಪ್ರತಿಷ್ಠಾಪನೆ ಜರುಗಲಿತ್ತು. ಆದಕ್ಕಾಗಿ ಅಡಿಗೆ, ಮೇಲುಗೆಲಸ ಮಾಡಲು ಜನಬೇಕೆಂದು ಕೇಳಿದಾಗ, ಭೀಮನ ತಾಯಿ ಮತ್ತು ಅಜ್ಜಿ ಹೊರಟು ನಿಂತರು. ಹುಟ್ಟೂರನ್ನು ಬಿಡದಿದ್ದರೆ, ವಿದ್ಯಾಭ್ಯಾಸದ ಆಸೆಯನ್ನೂ ಬಿಡಬೇಕಾಗುವ ದೆಂಬ ಕಟುಸತ್ಯ ಭೀಮನಿಗೆ ಮನವರಿಕೆಯಾಗಿತ್ತಾದ್ದರಿಂದ ತಾನೂ ಹೊರಟು ನಿಂತನು. "ಅಲ್ಲಿ ಹೋಗಿ ಇಂಗ್ಲೀಷ್ ಕಲೀತೀನಿ" ಎಂದು ವಾದಿಸಿದನು-- ಅಂಥ ಶಾಲೆ ಸಿಂಧನೂರಲ್ಲಿ ಇದೆಯೇ ಇಲ್ಲವೆ-ಎಂಬುದು ಸಹ ಗೊತ್ತಿಲ್ಲದೇ ! ತಂದೆ ಗದರಿಸಿದರು. ತಾಯಿಗೂ ಇಷ್ಟವಿರಲಿಲ್ಲ.

ಇಪ್ಪತ್ತನೆಯ ಶತಮಾನವೇ ಕಾಲಿರಿಸದಿದ್ದ ಆಗಿನ ದಿನಗಳಲ್ಲಿ, ಗುಳೇದ ಗುಡ್ಡದಂಥ ಸಣ್ಣ ಊರಲ್ಲಿ ಬಸ್ಸುಗಳು ಎಲ್ಲಿಂದ ಬರಬೇಕು? ಅದೂ ೯೦ ಮೈಲು ದೂರದ ಮೊಗಲಾಯಿ ಗ್ರಾಮಕ್ಕೆ. ಆದ್ದರಿಂದ ಇವರು ಒಂದು ತಟ್ಟು ಕುದುರೆಯನ್ನು ಬಾಡಿಗೆ ಮಾಡಿಕೊಂಡು ಹೊರಟರು, ತುಸುದೂರ ಸಾಗಿರಬೇಕು. ಧೂಳಿನ ದಾರಿಯಲ್ಲಿ ಈ ಹೆಂಗಳೆಯರಿಗೆ ತಮ್ಮ ಭೀಮನಂತೆಯೇ ಇರುವ ಓರ್ವ ಹುಡುಗ ಕಂಡನು. ಹೌದು, ಅವನೇ ! ತಾನೂ ಬರುವು ದಾಗಿ ಹಟಮಾಡಿ ಅಳತೊಡಗಿದನು. ಅವನನ್ನು ಪುನಃ ಗದರಿಸಲು ಸನಿಹದಲ್ಲಿ ತಂದೆ ಇರಲಿಲ್ಲ. ಬದಲಾಗಿ ಸದಾ ಅಚ್ಚೆ ಮಾಡುವ ಅಜ್ಜಿ ! ಅಂತೂ ಈ ೨॥ ಜನರ ಸವಾರಿಯು, ಪಾಳಿಯ ಮೇಲೆ ಒಂದಿಷ್ಟು ನಡೆದುಕೊಂಡು ಬರುತ್ತ, ಐದು ದಿನಗಳ ಪ್ರಯಾಣಾನಂತರ ಸಿಂಧನೂರನ್ನು ಸೇರಿತು.

ಆ ಊರಲ್ಲಿ ಹೈಸ್ಕೂಲು ಇಲ್ಲವೇ ಇಲ್ಲ. ಇದ್ದದ್ದು ಉರ್ದು ಶಾಲೆ. ನಿಜಾಮರ ರಾಜ್ಯದಲ್ಲಿ ಅದು ರಾಜ ಭಾಷೆ ತಾನೇ. ಭೀಮನು ಎರಡು ವರ್ಷ ಅತಿ ಕಷ್ಟದಿಂದ ಉದರ ನಿರ್ವಹಣೆಯನ್ನು ಹೊಂದಿಸಿಕೊಂಡು ಅಲ್ಲಿಯೇ ಕಲಿತನು. ಆದರೆ ಮೂಲ ಉದ್ದೇಶ ಕೈಗೂಡಿರಲಿಲ್ಲ. ಇಂಗ್ಲೀಶ್ ಶಾಲೆಯಿರುವ, ಹಾಗೂ ಅಲ್ಲಿ ತನಗೆ ಊಟಕ್ಕೆ ಹಾಕಿ ಇಟ್ಟುಕೊಳ್ಳುವಂಥ ಮನೆ ಇರುವ

ಊರೂರುಗಳನ್ನು–ಮಾನ್ವಿ, ರಾಯಚೂರು, ಶಹಾಪೂರ, ಸುರಪುರ ಇತ್ಯಾದಿ ಅಲೆದಾಡಿದನು.* ನಾಲ್ಕೈದು ವರ್ಷ ಹೀಗೆ ಸುತ್ತಾಡಿದ ಮೇಲೆ ಗಳಿತ ಪ್ರಯತ್ನನಾಗಿ ಭೀಮಣ್ಣನು ಮರಳಿ ಗುಳೇದಗುಡ್ಡಕ್ಕೇನೆ ಬಂದನು.

ಇಲ್ಲಿಯೂ ಒಂದು ಉರ್ದೂ ಪ್ರಾಥಮಿಕ ಶಾಲೆಯಿದ್ದಿತು – ಮುಸ್ಲಿಂ ಮಕ್ಕಳಿಗಾಗಿ. ಅಲ್ಲಿ ಅಸಿಸ್ಟಂಟ್ ಮಾಸ್ತರನ ಜಾಗ ಖಾಲಿಯಿದ್ದಿತು. ಭೀಮಾಚಾರ್ಯನ ಉರ್ದೂ ಕಲಿಕೆ ಎರಡು–ಮೂರನೆಯ ಇಯತ್ತೆಯದು ಮಾತ್ರ. ಮೇಲಾಗಿ ೧೬ ವರ್ಷದ ಅಲ್ಪವಯಿ. ಆದರೂ ೭ ರೂಪಾಯಿ ಸಂಬಳದ ಆ ನೌಕರಿ ಸಿಕ್ಕಿತು ! ಒಳ್ಳೇ ಹುರುಪಿನಿಂದ ಪಾಠ ಹೇಳಿದನು. ಹೆಡ್‌ಮಾಸ್ತರ ಸೈಪುದ್ದೀನರ ವಿಶ್ವಾಸಕ್ಕೆ ಪಾತ್ರನಾದನು. ಒಂದು ಒಳ್ಳೆಯ ಸಂಗತಿಯೆಂದರೆ, ಆ ಹಣವನ್ನು ಭೀಮನ ತಂದೆ ತಮ್ಮ ಸಂಸಾರ ನಿರ್ವಹಣೆಗಾಗಿ ಕಸಿದು ಕೊಂಡಿರಲಿಲ್ಲ ! ಹೀಗಾಗಿ ಒಂದೆರಡು ವರ್ಷಗಳ ಅವಧಿಯಲ್ಲಿ ತುಸು ಹಣ ವನ್ನು ಉಳಿಸುವುದು ಭೀಮಾಚಾರ್ಯನಿಗೆ ಸಾಧ್ಯವಾಯಿತು.

ಗುಳೇದಗುಡ್ಡದಲ್ಲಿ ಶಾಲೇಯ ಪುಸ್ತಕಗಳ ಅಂಗಡಿಯಿರಲಿಲ್ಲ. ಅವು ಬೇಕೆಂದಾಗ ಬಾಗಿಲುಕೋಟೆಗೆ ಹೋಗಿ ತರುತ್ತಿದ್ದರು. ಭೀಮಾಚಾರ್ಯನು ಮನೆಯಲ್ಲಿಯೆ ಒಂದು ಸಣ್ಣ ಪುಸ್ತಕದ ಅಂಗಡಿಯನ್ನು ತೆರೆದನು. ಜೊತೆಗೆ ಎಕ್ಸರಸೈಜ್ ಮುಂತಾದ ಲೇಖನ ಸಾಧನಗಳನ್ನೂ ತಂದು ಇರಿಸಿದನು. ಬೆಳಗಾಂವಿಯಲ್ಲಿ ಸ್ವದೇಶೀ ಸಾಮಾನುಗಳ ಅಂಗಡಿಯೊಂದು ಇದೆಯೆಂದು ತಿಳಿದುಬಂತು. ಸ್ವದೇಶೀ ಚಳುವಳಿಯ ಭಾಷಣಗಳನ್ನು ಎಳೆಯ ವಯಸ್ಸಿನಲ್ಲಿ ಕೇಳಿದ್ದ ಅವನಿಗೆ ಅಂಥ ಸಾಮಾನುಗಳನ್ನೂ ತರಿಸಿ ಮಾರಾಟಮಾಡಬೇಕೆಂದು

* 'ಮುಂದುವರಿದವರು' ಎಂಬ ಹಣೆಪಟ್ಟಿಯನ್ನು ಬ್ರಾಹ್ಮಣ ವರ್ಗಕ್ಕೆ ತಗುಲಿಸಲಾದರೂ ಎರಡು ಹೊತ್ತಿನ ಅನ್ನ, ವಿದ್ಯಾರ್ಜನೆಯ ಅನುಕೂಲ—ಇವು ಇಲ್ಲದ ಇಂಥ ಬ್ರಾಹ್ಮಣ ಕುಟುಂಬಗಳು ನೂರಾರು ಅಲ್ಲ, ಸಾವಿರಾರು ಇವೆ, ಎಂಬುದನ್ನು ನೆನೆದಿರಬೇಕು. ಈಗಷ್ಟೇ ಅಲ್ಲ, ಒಂದೆರಡು ಶತಮಾನಗಳಿಂದ ನಡೆದುಕೊಂಡು ಬಂದ ಬಳುವಳಿ ಇದು. ಉಳಿದ ಬಡ ವರ್ಗದವರಿಗೂ ಇವರಿಗೂ ಇರುವ ವ್ಯತ್ಯಾಸವೆಂದರೆ, 'ಇತರರಿಗೆ ಉಪ ಜೀವನದ ಬೇರೆ ಮಾರ್ಗಗಳಿದ್ದರೆ ತನಗೆ ವಿದ್ಯೆಯೊಂದೇ ಗತಿ ; ಅದಕಾರಣ ಎಂತಾದರೂ ವಿದ್ಯಾರ್ಜನೆ ಮಾಡಲೇಬೇಕು' ಎಂಬ ಛಲದಮ್ಮ ಒತ್ತಾಸೆ

ಕಂಡಿತು. ಹೀಗೆ, ಕಡಿಮೆ ಲಾಭಾಂಶದಲ್ಲಿಯೇ ಆಗಲಿ, ವ್ಯಾಪಾರ ಬೆಳೆಯಿತು. ಅದರಿಂದಾಗಿ ರಸ್ತೆಯ ಮೇಲಿನ ಒಂದು ಚಿಕ್ಕ ಮಳಿಗೆಗೆ ಅಂಗಡಿಯು ಸ್ಥಾನ ಬೆಳೆಸಿತು – "ಶ್ರೀ ಲಕ್ಷ್ಮೀನಾರಾಯಣ ಬುಕ್ಕ ಡಿಪೊ" ಎಂಬ ಹೆಸರಿನಲ್ಲಿ. ಉರ್ದೂ ಶಾಲೆ ಬಿಟ್ಟಮೇಲೆ. ಸಂಜೆ ಇದರ ವ್ಯವಹಾರ ನಡೆಯುತ್ತಿತ್ತು.

ಆ ವೇಳೆಗೆ ಮಹೇಂದ್ರಕರರೆಂಬ ಹುಬ್ಬಳ್ಳಿಯ ಫೋಟೋಗ್ರಾಫರರು ಗುಳೇದಗುಡ್ಡಕ್ಕೆ ಬಂದರು. ಈಗಿನ ಹಾಗೆ ಬೀದಿಗೊಂದರಂತೆ ಫೋಟೋ ಸ್ಟುಡಿಯೋಗಳಿರಲಿಲ್ಲ. ಟೂರಿಂಗ್ ಫೋಟೋಗ್ರಾಫರರ ಕಾಲವದು. (ಹಳ್ಳಿಯ ಜಾತ್ರೆಗಳಲ್ಲಿ ಈಗಲೂ ಇಂಥವರನ್ನು ಕಾಣಬಹುದೆನ್ನಿ.) ತಮ್ಮ ಮೈ-ಮುಖ ಗಳನ್ನು ತದ್ವತ್ತಾಗಿ ಮೂಡಿಸಬಲ್ಲ ಈ ಕಲೆ ಜನಕ್ಕೆ ಆಕರ್ಷಕವೆನಿಸಿತ್ತು. ಮಹೇಂದ್ರಕರರು ಗುಳೇದಗುಡ್ಡದಲ್ಲಿ ಹಲವು ವಾರ ಇದ್ದುಕೊಂಡು, ಅನೇಕರ ಫೋಟೊ ತೆಗೆಯುತ್ತಿದ್ದಾಗ, ತಾವೂ ಏಕೆ ಈ ಯಕ್ಷಿಣೀ ವಿದ್ಯೆಯನ್ನು ಕಲಿಯ ಬಾರದು–ಎಂದು ಭೀಮಾಚಾರ್ಯರಿಗೆ ತೋಚಿತು. ಸರಿ, ಮಹೇಂದ್ರಕರರ ಸ್ನೇಹ ಸಂಪಾದಿಸಿದರು. ಒಂದು ತಿಂಗಳು ರಜೆ ಪಡೆದಾದರೂ ಅದನ್ನು ಕಲಿ ಯುವ ಉತ್ಕಟಾಪೇಕ್ಷೆ! ಅದಕ್ಕಾಗಿ ಹುಬ್ಬಳ್ಳಿಗೆ ಹೋಗಿ, ಅವರಲ್ಲಿಯೇ ಇದ್ದು ಕಲಿತು, ರೂಢಿ ಮಾಡಿಕೊಂಡರು. ಒಂದು ನೂರು ರೂಪಾಯಿಯಷ್ಟು ಅದುವರೆಗೆ ಕೂಡಿರಿಸಿದ್ದ ಹಣವನ್ನೆಲ್ಲ ವೆಚ್ಚಮಾಡಿ, ಕ್ಯಾಮೆರಾ ಮತ್ತು ಅದಕ್ಕೆ ಬೇಕಾಗುವ ಫಿಲ್ಮ್, ಕಾಗದ, ರಸಾಯನಗಳನ್ನು ತಂದುಬಿಟ್ಟರು.

ಆದರೆ ಮರಳಿ ಇಲ್ಲಿಗೆ ಬಂದ ಮೇಲೆ, ಫೋಟೋಗಳು ಚೆನ್ನಾಗಿ ಮೂಡಿದ್ದೇ ಇಲ್ಲ! ಮಹೇಂದ್ರಕರರಲ್ಲಿ ನಾಲ್ಕು ವಾರ ಇದ್ದರೂ ಪ್ರಯೋಜ ನಕ್ಕೆ ಬಾರದೆ ಹೋಯಿತು. ಈ ವಿದ್ಯೆ ತಾನೆಣಿಸಿದಷ್ಟು ಸರಳವಲ್ಲ ಎಂದು ತೋಚಿ, ಕ್ಯಾಮೆರಾವನ್ನು ನಾಗೊಂದಿಗೆಗೆ ಸೇರಿಸಿದರು !

ಈ ವೇಳೆಗೆ ಇಪ್ಪನೆಯ ಶತಮಾನವು ಕಾಲಿರಿಸಿಯಾಗಿತ್ತು. ಸ್ವರಾಜ್ಯ ಚಳುವಳಿಯ ಗಾಳಿ ಪುಣೆಯ ಕಡೆಯಿಂದ ಉತ್ತರ ಕರ್ನಾಟಕದತ್ತ ಬೀಸುತ್ತಿದ್ದ ಕಾಲವದು. ಅಲ್ಲಿಯ ಸುಧಾರಕರು, ಟಿಳಕರು ಆರಂಭಿಸಿದ್ದ ಗಣೇಶೋತ್ಸವದ ಮೂಲಕ ಸ್ವಾತಂತ್ರ್ಯದ ಬೀಜವನ್ನು ಜನಮನದಲ್ಲಿ ಬಿತ್ತುತ್ತ ನಡೆದಿದ್ದರು.

ಪುಣೆಯಿಂದ ಪರಾಂಜಪೆ ಎಂಬವರು ಬಂದು ಊರಲ್ಲಿಯ ಹುಡುಗರನ್ನು ಕಲೆ ಹಾಕಿ ಕವಾಯಿತು ಮುಂತಾದ್ದನ್ನು ಮಾಡಿಸುತ್ತಿದ್ದರು. ಸಮವಸ್ತ್ರ ಧರಿಸಿದ ತಮ್ಮ ಆ ಮಂಡಳಿಯನ್ನು ಅವರು ಗಣೇಶನ ಹಬ್ಬದ ದಿನಗಳಲ್ಲಿ ಮನೆಮನೆಗೆ ಕರೆದೊಯ್ದು ದೇಶಭಕ್ತಿಯ ಹಿಂದೀ, ಮರಾಠೀ ಹಾಡುಗಳನ್ನು ಹಾಡಿಸುತ್ತಿದ್ದದ್ದು ತರುಣ ಭೀಮಾಚಾರ್ಯರ ಮನಸ್ಸಿನ ಮೇಲೆ ಗಾಢ ಪರಿಣಾಮ ಮಾಡಿದ್ದಿತು.

ಹಳ್ಳಿಗಳಲ್ಲಿಯ ಅಂಗಡಿ ಕಟ್ಟೆಯ ಮೇಲೆ ಕುಳಿತು ಜನ ಹರಟೆ ಹೊಡೆಯುವುದು ಸಹಜವೇ. ಲಕ್ಷ್ಮೀನಾರಾಯಣ ಬುಕ್ಕ ಡಿಪೋದ ಕಟ್ಟೆಯ ಮೇಲೆ, ಶಿಕ್ಷಕರು, ಮಕ್ಕಳ ಪಾಲಕರು, ಮುದುಕರು ಬರುತ್ತಿದ್ದರು, ಚಂದಪ್ಪನೆಂಬ ಹವಾಲದಾರನೂ ಹಾಗೆ ಹರಟೆ ಹೊಡೆಯುತ್ತ ಕುಳಿತಿರುತ್ತಿದ್ದ, ಒಂದು ದಿನ ಅವನಿಗೆ ಅಂಗಡಿಯಲ್ಲಿ ಹೊಸಫ್ರೇಮ್ ಹಾಕಿ ಇರಿಸಿದ ಟಿಳಕರ ಫೋಟೊ ಕಂಡಿತು. ಅಲ್ಲಿ ಅದು ಹೇಗೆ ಬಂದಿತೆಂಬುದು ಗೊತ್ತಿಲ್ಲದೆಯೊ, ಅಥವಾ ಗೊತ್ತಿದ್ದರೂ ಇದೊಂದು ಕೇಸು ಸಿಕ್ಕಿತೆಂದೋ, ಚಂದಪ್ಪನು ಆ ಬಗ್ಗೆ ಮೇಲಧಿಕಾರಿಗಳಿಗೆ ಗುಪ್ತ ವರದಿ ಕಳಿಸಿದ. ಮರುದಿನವೇ ಸರ್ಕಲ್ ಇನಸ್ಪೆಕ್ಟರರು ಬಂದರು. ಅಂಗಡಿಯಲ್ಲಿಯ ಸಾಮಾನನ್ನೆಲ್ಲ ಕಿತ್ತಾಡಿದರು–ರಾಷ್ಟ್ರೀಯ ಸಾಹಿತ್ಯ, ಸಾಮುಗ್ರಿ ಏನೇನಿದೆಯೆಂಬುದನ್ನು ನೋಡಲು, ಪಠ್ಯಪುಸ್ತಕಗಳು, ನೋಟ್‌ಬುಕ್, ಮಸಿಗುಳಿಗೆ, ಫೋಟೊ ಕಟ್ಟು ಹಾಕಲು ಬೇಕಾಗುವ ಸಾಮುಗ್ರಿ ಇಷ್ಟನ್ನು ಬಿಟ್ಟರೆ ಏನೂ ಇರಲಿಲ್ಲ. ಆದರೆ ಇದೊಂದು ಫೋಟೊ ಇತ್ತಲ್ಲ! "ಗೋವಿಂದರಾವ್ ಎನ್ನುವವರು ಕಟ್ಟು ಹಾಕಲೆಂದು ಕೊಟ್ಟಿದ್ದಾರೆ" ಎಂದು ಭೀಮಾಚಾರ್ಯರು ತಿಳಿಸಿದಾಗ, ಅವರಿಗೆ ಕರೆ ಹೋಯಿತು. ಗೋವಿಂದರಾಯರು ಊರಿನ ಗಣ್ಯವ್ಯಕ್ತಿ. ಅವರನ್ನು ಕೇಳಿದಾಗ, "ಛೆ, ನಾನು ಕೊಟ್ಟಿದ್ದು ಅಲ್ಲವೆ ಅಲ್ಲ" ಎಂದುಬಿಟ್ಟರು ! ಯಾರೇ ಆಗಲಿ ರಾಜದ್ರೋಹಿಗಳ ಫೋಟೊ ಇಟ್ಟುಕೊಳ್ಳುವುದೆ ? ಆಗಿಂದಾಗ ಅಂಗಡಿಯನ್ನು ಮುಚ್ಚಲು ಸರಕಾರದ ಹುಕುಮು ಹೊರಟಿತು.

ಟಿಳಕರ ಫೋಟೊ ಬಹಿರಂಗವಾದ ಈ 'ಮಹಾನ್' ರಾಜದ್ರೋಹದ ಸುದ್ದಿಯು, ಆಗಿನ ಜಿಲ್ಲಾ ಕಲೆಕ್ಟರನವರೆಗೂ ಹೋಯಿತು. ಈ ಬಗೆಯ

ಆರೋಪದ ಮೇಲೆ ಇನ್ನಿಬ್ಬರು ಶಿಕ್ಷಕರ ಮೇಲೆಯೂ ನಜರು ಇಡಲಾಗಿತ್ತು. ಇವರು ಭೀಮಾಚಾರ್ಯರ ಅಂಗಡಿಯ ಕಟ್ಟೆಗೆ ದಿನವೂ ಬರುತ್ತಿದ್ದದ್ದೇ ಅವರ ಅಪರಾಧವಾಗಿತ್ತು. ಪ್ರಾಥಮಿಕ ಶಾಲೆಗಳು ಸ್ಕೂಲ್‌ಬೋರ್ಡಿನ ಕೈಕೆಳಗಿರದೆ, ಶಿಕ್ಷಣ ಖಾತೆಯ ನೇರ ವಶದಲ್ಲಿದ್ದಿದ್ದರೆ ಈ ಮೂವರು ಶಿಕ್ಷಕರನ್ನು ಆ ಕ್ಷಣವೆ ಕೆಲಸದಿಂದ ತೆಗೆದುಹಾಕುತ್ತಿದ್ದರು !

ಕೆಲ ಕಾಲ ಸರಿದ ಮೇಲೆ ಜಿಲ್ಹಾ ಕಲೆಕ್ಟರನು (ಶೆಫರ್ಡ್ ಎಂಬುದು ಅವನ ಹೆಸರು) ಗುಳೇದಗುಡ್ಡಕ್ಕೆ ಬರುವವನಿದ್ದ. ಸರಿ, ಅವನಿಗೆ ಸ್ಕೂಲ್ ಬೋರ್ಡಿನವರು ಆಗಿನ ಕಾಲದ ಶಿಷ್ಟಾಚಾರದಂತೆ 'ಪಾನಸುಪಾರಿ' ಕೊಡಬೇಕೆಂದರು. ಆತನೋ "ಆ ಮೂವರು ರಾಜದ್ರೋಹಿ ಶಿಕ್ಷಕರನ್ನು ಕೆಲಸದಿಂದ ತೆಗೆದರೆ ಮಾತ್ರ ಬರುವೆ" ಎಂದು ತಿಳಿಯಪಡಿಸಿದನು. ಈ ವಿಷಯವು ಬೋರ್ಡಿನ ಸಭೆಯಲ್ಲಿ ಮತ್ತೆ ಚರ್ಚೆಗೆ ಬಂದಾಗ, ಒಬ್ಬ ಮೆಂಬರರು ಮಾತ್ರ-ಅವರು ಖಾಸಗೀ ಡಾಕ್ಟರರು–ಇದನ್ನು ವಿರೋಧಿಸಿದರಂತೆ. ಆದರೆ ಪ್ರಯೋಜನವಾಗಲಿಲ್ಲ. ಊರಲ್ಲಿಯ ಉರ್ದೂ ಮಾಸ್ತರಿಕೆಯಿಂದ ಭೀಮಾಚಾರ್ಯರ 'ಬರತರ್ಫ್' ಆಯಿತು (೧೯೦೯). ಬೋರ್ಡಿನ ಚೇರಮನ್ನರು ಅವರನ್ನು ಕರೆದು "ಕಲೆಕ್ಟರರಿಗೆ ಹೋಗಿ-ಮಾಫಿ ಬೇಡಿರಿ. ಇನ್ನೊಮ್ಮೆ ರಾಜದ್ರೋಹದ ಯಾವ ಕೆಲಸ ಮಾಡುವದಿಲ್ಲ ಎಂದು ಹೇಳಿಕೆ ಕೊಟ್ಟು ಬರ್ರಿ. ಆಗ ನಿಮ್ಮನ್ನು ಮತ್ತೆ ಕೆಲಸದ ಮೇಲೆ ತಗೊಳ್ಳುವೆವು" ಎಂದರಂತೆ! ಇನ್ನಿಬ್ಬರು ಶಿಕ್ಷಕರು ಹಾಗೆ ಬರೆದುಕೊಟ್ಟು ಮತ್ತೆ ಕೆಲಸಕ್ಕೆ ಹಾಜರಾದರು. ಭೀಮಾಚಾರ್ಯರು ? ತಮ್ಮ ಮೇಲೆ ಅನಾವಶ್ಯಕವಾಗಿ ಅಪಾದನೆ ಮಾಡಿ, ಅಂಗಡಿಯನ್ನೇ ಮುಚ್ಚಿಸಿದ್ದು ಅವರಿಗೆ ಸಂತಾಪ ಬರಿಸಿತ್ತು. ಇದಂತೂ ಸ್ವಾಭಿಮಾನದ ಪ್ರಶ್ನೆ. ಹಿರಿಯರಾದ ಸೈಪುದ್ದೀನರಿಗೆ ಆತ್ಮೀಯವಾದ ವಿದಾಯ ಹೇಳಿ, ನೌಕರಿಗೆ ಶರಣು ಹೊಡೆದರು.

ಈ ಮಧ್ಯೆ ಭೀಮಾಚಾರ್ಯರ ಮದುವೆಯೂ ಆಗಿತ್ತು ಇದ್ದೂರಿನಲ್ಲೇ. ಅದರೇನು, ವ್ಯಾಪಾರವೂ ಇಲ್ಲ, ನೌಕರಿಯೂ ಇಲ್ಲ ಎಂಬ ಸ್ಥಿತಿ ಬಂದೊದಗಿದ್ದಿತು. ಇಲ್ಲಿಯೇ ಇದ್ದರೆ ಬೇರೇನಾದರೂ ಕಾರಣ ಹುಡುಕಿ ಸರಕಾರದವರು ಕಿರುಕುಳ ಕೊಡುವವರೇ ಎಂದುಕೊಂಡು, ರಾಮದುರ್ಗ ಸಂಸ್ಥಾನಕ್ಕೆ

ಹೋದರು-ಜೊತೆಗೆ ಕ್ಯಾಮೆರಾ ಪೆಟ್ಟಿಗೆಯಿದ್ದಿತು. ಛಾಯಾಚಿತ್ರ ದೇವತೆ ಆಗೂ ಇವರಿಗೆ ಒಲಿದಿರಲಿಲ್ಲ. ಕೆಲವು ತಿಂಗಳಾದ ಮೇಲೆ ಮಾವನು ತೀರಿ ಕೊಂಡ ಸುದ್ದಿ ಬಂದಿತು. ಅವರೂ ವ್ಯಾಪಾರದಲ್ಲಿಯೇ ಇದ್ದುದೊಂದು ವಿಶೇಷ. ಅವರದು ಕಾಳುಕಡಿಗಳ ಅಡತಿ/ದಲಾಲಿ ಅಂಗಡಿ. ಆದರೆ ಲುಕ್ಸಾನಿನಲ್ಲಿಯೇ ಸಾಗಿದ್ದಿತಾದ್ದರಿಂದ, ಹೊಲ ಮನೆಗಳೆಲ್ಲ ಒತ್ತೆ ಬಿದ್ದಿದ್ದವು. ಭೀಮಾಚಾರ್ಯರು ತಮ್ಮ ಜವಾಬ್ದಾರಿಯಲ್ಲಿ ಅಂಗಡಿಯನ್ನು ನಡೆಸಲಿಂದರು. ವ್ಯವಹಾರವನ್ನು ನಿಲ್ಲಿಸಿಬಿಟ್ಟಿದ್ದರೆ ಇನ್ನಷ್ಟು ಸಾಲವಾಗಬಹುದಿತ್ತು. ಇವರ ಆಡಳಿತೆಯಲ್ಲಿ ವ್ಯವಹಾರ ಚೇತರಿಸಿಕೊಳ್ಳ ತೊಡಗಿತು. ಅಂಗಡಿಯು ಹಿಂದಿನ ಸಾಲ ತೀರುವೆಯು ಒತ್ತಡ ಬಂದಾಗ, ಇವರ ಮಾವನ ಅಣ್ಣನು, ಭೀಮಾ ಚಾರ್ಯರೇ ಅದನ್ನು ಕೊಟ್ಟು ತೀರಿಸಬೇಕೆಂದನು. ಇವರಿಗೆ ಬೇಸರವಾಯಿತು. ಅಂಗಡಿಯನ್ನು ಬಿಟ್ಟುಕೊಟ್ಟರು. ಪುನಃ ಗ್ರಾಮತ್ಯಾಗ....!

ಆದರೆ ಎಲ್ಲಿಗೆ ಹೋಗಬೇಕು ? ಈ ಬಾರಿ ಪೂರ್ವ ಪರಿಚಯದ ಸಿಂಧ ನೂರನ್ನು ಆಯ್ದುಕೊಂಡರು. ಉದ್ಯೋಗ ? ಫೋಟೊಗ್ರಾಫಿ ! ಆದರೆ ಅದನ್ನೊಂದೇ ನೆಚ್ಚಿಕೊಂಡಿರುವಂತಿದ್ದಿಲ್ಲ. ಗುಳೇದಗುಡ್ಡವು ಎಂದಿಗೂ ಖಣಕ್ಕೆ ಪ್ರಸಿದ್ಧವಾದ ಊರು, ಸಿಂಧನೂರು ದೂರವಿದ್ದರೇನಾಯಿತು : ಇಲ್ಲಿ ಖರೀದಿಸಿ, ಅವನ್ನು ಸಿಂಧನೂರು, ಬಳಗಾನೂರು ಮುಂತಾದ ಕಡೆಗಳಿಗೆ ಹೊತ್ತುಕೊಂಡು ಹೋಗಿ, ವ್ಯಾಪಾರ ಮಾಡತೊಡಗಿದರು. ಇವರ ಲಾಭಾಂಶವಾದರೂ ಕಡಿಮೆಯದೇ ಎಂದು ಬೇರೆ ಹೇಳಬೇಕಾಗಿಲ್ಲ.

ಹೀಗಿರುತ್ತ ಕಲಬುರ್ಗಿಯ 'ಮೊಹತಮಿಮ್'ನಲ್ಲಿ (ಪೋಲೀಸ ಕಛೇರಿ) ಫೋಟೊಗ್ರಾಫರ್ ಕೆಲಸ ಖಾಲಿ ಇರುವ ವಿಷಯ ಭೀಮಾಚಾರ್ಯರಿಗೆ ತಿಳಿ ಯಿತು. ಅವರು ಅರ್ಜಿಹಾಕಿದರೆ, ಕೂಡಲೇ ಕೆಲಸಕ್ಕೆ ಹಾಜರಾಗಲು ಆರ್ಡರ್ ಬರಬೇಕೆ ! ಈ ಮೊದಲು ಹೇಳಿದಂತೆ ಈ ಕಸಬನ್ನು ಬಲ್ಲವರು ಕಡಿಮೆ ಜನ ಇದ್ದರು. ಅಪಘಾತ ನಡೆದ ಸ್ಥಳದ ಮತ್ತು ಅಪರಾಧಿಗಳ ಫೋಟೊ ತೆಗೆಯು ವುದು ಪೋಲೀಸರಿಗೆ ಅಗತ್ಯದ ಕೆಲಸವಷ್ಟೆ.

ಆರ್ಡರ್ ಬಂದಾಗ ಅವರು ರಾಯಚೂರಿನಲ್ಲಿ ಇದ್ದರು. ಅಲ್ಲಿಂದ

ಕಲಬುರ್ಗಿಯ ತನಕ ಹೋಗುವಷ್ಟು ಹಣ ಇರಲಿಲ್ಲ. ಸರಿ, ಸೈದಾಪುರದ ವರೆಗೆ (ಅಥವಾ ನಾರಾಯಣಪೇಟೆ ?). ರೈಲಿನ ಟಿಕೇಟು ತೆಗೆದರು. ಅಲ್ಲಿಂದ ನಡೆದು ಹೋಗುವ ವಿಚಾರ ಅವರದು, ಕತ್ತಲಾಗತೊಡಗಿದ್ದಿತೆಂದು ಅಲ್ಲೇ ಪ್ಲಾಟ್‌ಫಾರ್ಮಿನ ಬೆಂಚಿನ ಮೇಲೆ ಒರಗಿದರು. ಹಸಿವು ಬೇರೆ. ಹಣವಿಲ್ಲದ್ದ ರಿಂದ ಏನೂ ತಿಂದಿರಲಿಲ್ಲ. ಅಲ್ಲಿಯ ರೇಲ್ವೆ ಕಾರಕೂನನು ಅವರನ್ನು ಯಾರೋ ಹಾದಿಹೋಕನಿರಬೇಕೆಂದು ಎಣಿಸಿ ವಿಚಾರಿಸಿದನು. ಪರಿಸ್ಥಿತಿ ತಿಳಿದ ಮೇಲೆ ತನ್ನ ಮನೆಗೆ ಕರೆದೊಯ್ದನು. ಹೊಟ್ಟೆ ತುಂಬ ಊಟವಾಯಿತು, ಫೋಟೊ ಗ್ರಾಫರನೆಂಬ ಮರ್ಯಾದೆಯೂ ಸಿಕ್ಕಿತು. ಇವರು ನಾಲ್ಕಾರು ದಿನ ಅಲ್ಲಿಯೇ ನಿಂತು, ಆತಿಥೇಯರ ಸಹಾಯದಿಂದ ಊರೊಳಗೆ ಅಡ್ಡಾಡಿ, ಫೋಟೊ ತೆಗೆದು ಒಂದಷ್ಟು ಹಣ ಸಂಪಾದಿಸಿದರು. ಕಿಸೆ ತುಂಬ ನಾಣ್ಯಗಳು ! ಒಳ್ಳೇ ಖುಶಿಯಿಂದ ಕಲಬುರ್ಗಿಗೆ ಬಂದು, ಪೋಲೀಸ್ ಕಚೇರಿಗೆ ಹೋದರು.

ಆದರೆ ಅಲ್ಲಿ ಬೇರೊಬ್ಬರನ್ನು ನೇಮಿಸಿಬಿಟ್ಟಿದ್ದರು ! 'ನಡುದಾರಿಯಲ್ಲಿ ಹಣಗಳಿಕೆಗೆ ಮನಸೋತು ಸುಮ್ಮನೆ ನೌಕರಿ ಕಳೆದುಕೊಂಡೆನಲ್ಲ; ಕೈಗೆ ಬಂದ ತುತ್ತು ಬಾಯಿಗೆ ಬರದಂತಾಯಿತಲ್ಲ' ಎಂದು ಪರಿತಪಿಸಿದರು. ಮೇಲಾಗಿ ನೇಮಿಸಿಕೊಂಡದ್ದು, ಫೋಟೊಗ್ರಾಫಿ ಎಳ್ಳಷ್ಟೂ ಗೊತ್ತಿರದ ಓರ್ವ ಧಾಂಡಿಗನನ್ನು ! ಇವರು ಮತ್ತೆ ಕೇಳಿಕೊಂಡಿರಬೇಕು. ಆಗ ಅಲ್ಲಿಯ ಸೂಪ ರಿಂಟೆಂಡೆಂಟನು "ಬೇಕಾದರೆ ಪೋಲೀಸ ಸಿಪಾಯಿಯಾಗಿ ಸೇರು, ಫೋಟೊ ಗ್ರಾಫರ್ ಜಾಗ ಖಾಲಿಯಾದಾಗ ನೋಡೋಣ" ಎಂದು ಹೇಳಿದ್ದಕ್ಕೆ ಒಪ್ಪಿದರು.

ಕೇವಲ ೧೦ ರೂ. ಸಂಬಳದ ಕನಿಷ್ಠ ದರ್ಜೆಯ ಪೋಲೀಸ್ ಪೇದೆಯ ಕೆಲಸವದು. ಕೈಗೆ ಬರುವ ೯ ರೂಪಾಯಿಯಲ್ಲಿ ಹೋಟೆಲ್ ಊಟಕ್ಕೇನೆ ೧೦ ರೂ. ಕೊಡಬೇಕಾದ ಪರಿಸ್ಥಿತಿ. ಇವರಿಗೋ ಊರೂರು ತಿರುಗಿ ಸಾಕು ಸಾಕಾ ಗಿತ್ತು, ಆದ್ದರಿಂದ ನೌಕರಿಗೆ ಒಪ್ಪಿ, ಹೆಂಡತಿಯನ್ನು ಕರೆಸಿಕೊಂಡು ಬಿಡಾರ ಹೂಡಿದರು. ಇಬ್ಬರ ಊಟ ವಸತಿಗೆ ಸಂಬಳವೊಂದೇ ಸಾಲದಿದ್ದಾಗ, ಪೇಟೆ ಯಲ್ಲಿ ಹಲವು ವರ್ಷಗಳಿಂದ ಖಾಲಿ ಬಿದ್ದಿದ್ದ ಮಹಡಿಯೊಂದನ್ನು ಸ್ವಚ್ಛ ಮಾಡಿಸಿ ಯಥಾಪ್ರಕಾರ 'ಫೋಟೊಗ್ರಾಫಿ'ಯ ಕಾಯಕವನ್ನು ಆರಂಭಿಸಿದರು.

ಚಿಮ್ಮಲಗಿ ಭೀಮಾಚಾರ್ಯರ ಆಗಿನ ದಿನಚರಿಯೆಂದರೆ ಬೆಳಿಗ್ಗೆ ೪॥ ಗೆ ಏಳುವುದು, ೫ ರಿಂದ ೮ರ ವರೆಗೆ ಕವಾಯತು. ಮಧ್ಯಾಹ್ನ ಆಫೀಸಿನಲ್ಲಿ ಆ ಈ ಚಿಲ್ಲರೆ ಕೆಲಸ. ಸಂಜೆ ೪ ರಿಂದ ೫ರ ವರೆಗೆ ಮತ್ತೆ ಕವಾಯತು. ಕೊಟ್ಟ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದ್ದರು. ಜನಪ್ರಿಯರೂ ಆಗಿದ್ದರು. ಆದರೆ ಈ ಪೋಲೀಸ ಸಿಪಾಯಿಯಾಗಲೆಂದೇ ತಾವು ಜನ್ಮ ತಾಳಿದ್ದೇ ? ಫೋಟೊಗ್ರಫಿ ಕೆಲಸ ಕೊಡದಿದ್ದರೆ ತಾವು ರಾಜೀನಾಮೆಯಿತ್ತು ಹೊರಟು ಹೋಗಬೇಕಾಗುವುದೆಂದು ಹೇಳುವಷ್ಟು ಸ್ವಾಭಿಮಾನ, ಧೈರ್ಯ ಅವರಲ್ಲಿ ಇದ್ದದ್ದೇ. ಹೀಗೇ ಎರಡುವರ್ಷ ಕಳೆಯಿತು. ಒಂದು ದಿನ ಅವರಿಗೆ ಓರ್ವ ಕೈದಿಯನ್ನು ೧೨ ಮೈಲು ದೂರದ ಊರಿಗೆ ಕರೆದೊಯ್ದು, ಅಲ್ಲಿ ಮುಟ್ಟಿಸುವ ಕೆಲಸ ಕೊಡಲಾಯ್ತು, ಅಷ್ಟನ್ನು ಮುಗಿಸಿ ಹಿಂತಿರುಗಿ ಬಂದು 'ಈ ಕತ್ತೇ ಕೆಲಸ ಇನ್ನು ಸಾಕು' ಎಂದು ರಾಜೀನಾಮೆ ಸಲ್ಲಿಸಿದರು.

ಆದರೆ ರಾಜೀನಾಮೆ ಸ್ವೀಕೃತವಾಗಿರಲಿಲ್ಲ. ಅಷ್ಟರಲ್ಲಿ ಹೈದ್ರಾಬಾದಿನ ಮುಖ್ಯ ಪೋಲೀಸು ಠಾಣೆಗೇನೆ ಓರ್ವ ಫೋಟೊಗ್ರಾಫರ್ ಬೇಕೆಂದೂ, ನಿಜಕ್ಕೂ ಯೋಗ್ಯರೊಬ್ಬರನ್ನು ಶಿಫಾರಸು ಮಾಡಬೇಕೆಂದೂ, ಎಲ್ಲ ಪೋಲೀಸು ಕಚೇರಿಗಳಿಗೆ ಹುಕುಂ ಹೋಯಿತು. ಕಲಬುರ್ಗಿಯವರಿಗೆ ಚಿಮ್ಮಲಗಿಯವರ ಹೆಸರನ್ನು ಸೂಚಿಸಲು ಇದೊಂದು ಸದವಕಾಶ ಸಿಕ್ಕಿತು. ಅದಕ್ಕೆ ಉತ್ತರ ಹೈದರಾಬಾದಿನಿಂದ ಆರ್ಡರ್ ಬಂದಿತು, ಕೂಡಲೇ ಹೊರಟು ನಿಂತರು (೧೯೧೧). ಹಿಂದಿನಂತೆ ತಡವಾಗಿ, ಈ ೨೫ ರೂ. ಸಂಬಳದ ನೌಕರಿ ತಪ್ಪಬಾರದಲ್ಲ !

ಇವರು ಹೊತ್ತಿಗೆ ಹೋಗಿ ಅಲ್ಲಿ ಮುಟ್ಟಿದರೂ ಆದದ್ದು ಹಾಗೇನೆ ! ಬೇರೊಬ್ಬರನ್ನು ನೇಮಿಸಿಬಿಟ್ಟಿದ್ದರು. ಮೊಗಲಾಯಿ ದರ್ಬಾರು ಎಂದರೆ ಇದೇನೇ. "ಆರ್ಡರ್ ತಲುಪಿ ಎರಡು ದಿನದ ಅವಕಾಶವನ್ನಾದರೂ ಕೊಡಬೇಡವೆ ?" ಎಂದೆಲ್ಲ ಇವರು ಆಕ್ಷೇಪಿಸಿದರು. "ಏನು ಮಾಡೋದು ? ನವಾಬರ ಪೈಕಿ ಒಬ್ಬರು ಬಂದಿದ್ದರು, ಅವರನ್ನು ನೇಮಿಸಲೇಬೇಕಾಯಿತು. ಹೇಗೂ ಬಂದೀರಿ, ೧೫ ರೂ. ಮೇಲೆ ಪೋಲೀಸು ಸಿಪಾಯಿಯೆಂದು ತೆಗೆದುಕೊಳ್ಳುತ್ತೇವೆ. ಅನುಭವವೂ ಇದೆಯಲ್ಲ" ಎಂದರು. ಇವರು "ಆ ಕೆಲಸ

ಬೇಡವೆಂದು ಅಲ್ಲಿ ರಾಜೀನಾಮೆಯನ್ನೇ ಕೊಟ್ಟಿದ್ದೇನೆ. ನಾನು ಮೇಲಿನವರನ್ನು ಕಾಣುತ್ತೇನೆ" ಎಂದೆಲ್ಲ ಪ್ರತಿಭಟಿಸಿದರು. ಅದಕ್ಕೆ "ಈಗ ಬಂದವರು ಬಹಳ ದಿನವೇನು ನಿಲ್ಲುವುದಿಲ್ಲ. ಆಮೇಲೆ ಫೋಟೊಗ್ರಾಫರ್ ಕೆಲಸ ನಿನಗೆ ಕೊಡ್ತೇವೆ" ಎಂದು ಸಮಾಧಾನ ಹೇಳಲಾಯಿತು.

ಪೋಲೀಸ್ ಠಾಣೆ ಇದ್ದುದು ಅಂಬರಪೇಟೆಯಲ್ಲಿ. ಇವರ ವಾಸ್ತವ್ಯ ಬಾರಾ ಗಲ್ಲಿಯಲ್ಲಿ. ಏಳು ಮೈಲಿಗಳ ಅಂತರವನ್ನು ದಿನವೂ ನಡೆದುಕೊಂಡೇ ಹೋಗಬೇಕು. ೧೪ ರೂ. (ರೂ. ೧೫–೧ ರೂ. ಡ್ರೆಸ್ಸಿಗಾಗಿ !) ಸಂಬಳದಲ್ಲಿ ಅದೇ ಕನಿಷ್ಠ ಸಿಪಾಯಿಯ ನೌಕರಿ ಆರಂಭವಾಯಿತು. ನಿಜವಾದ ಪೋಲೀಸು ಕೆಲಸಕ್ಕಿಂತ ಬಿಟ್ಟಿ ಕೆಲಸಗಳೇ ಜಾಸ್ತಿ. ಅಲ್ಲದೆ, ಅವರಿವರ ಮರ್ಜಿಯನ್ನು ಹಿಡಿದುಕೊಂಡೇ ಇರಬೇಕು. ಆದರೂ ಇಂದಿಲ್ಲ, ನಾಳೆ ತಮಗೆ ಫೋಟೊಗ್ರಾಫರ್ ನೌಕರಿ ಸಿಕ್ಕೀತೆಂಬ ಆಶಯದಿಂದ ನುಂಗಿಕೊಂಡರು. ವರ್ಷ ಸರಿದರೂ. ಅದರ ಸುಳಿವಿಲ್ಲ. ತ್ರಸ್ತರಾಗಿ ರಾಜೀನಾಮೆ ಸಲ್ಲಿಸಿದರು. ಆದರೆ ಇಲ್ಲಿಯೂ ಜನಪ್ರಿಯರಾಗಿದ್ದುದರಿಂದ, ರಾಜೀನಾಮೆಯನ್ನು ಬದಿಗೆ ಇರಿಸಲಾಯಿತು. ಅಲ್ಲದೆ, ಕೆಲಸಮಯದಲ್ಲಿಯೇ ಅವರಿಗೆ ಛಾಯಾಗ್ರಾಹಕನ ಕೆಲಸ ನಿಜವಾಗಿಯೇ ದೊರೆಯಿತು !

ಚಿಮ್ಮಲಗಿಯವರಿಗೆ ಆಗ ೨೩ ವರುಷ. ಜೀವನಕ್ಕೆ ಒಂದು ನೆಲೆ ಸಿಕ್ಕಿತೆಂಬ ನೆಮ್ಮದಿಯಲ್ಲಿ ಸಂಸಾರ ಹೂಡಿದರು. ಹಿರಿಯ ಮಗ ರಾಮಚಂದ್ರ ಜನಿಸಿದ. ಹುಬ್ಬಳ್ಳಿಯಲ್ಲಿ ಕಲಿಯುತ್ತಿದ್ದ ಬಂಧು ವೇದವ್ಯಾಸನ ಶಿಕ್ಷಣದ ಜವಾಬ್ದಾರಿಯನ್ನು ಇವರೇ ವಹಿಸಿದರು. ಬರುವ ಸಂಬಳದಲ್ಲಿ ಅವನಿಗೂ ಒಂದಷ್ಟು ಹಣ ಕಳಿಸುತ್ತಿದ್ದರು.

ಕಚೇರಿಯಲ್ಲಿ ಒಮ್ಮೆ ಲಂಚದ ಪ್ರಕರಣವೊಂದು ಬಹಿರಂಗವಾಯಿತು. ಚಿಮ್ಮಲಗಿಯವರ ಒಳ್ಳೆಯತನವನ್ನು ಕಂಡುಕೊಂಡಿದ್ದ ಓರ್ವ ಕಾರಕೂನನು ಇವರನ್ನು ತನ್ನ ಲಂಚದ ವ್ಯವಹಾರಕ್ಕಾಗಿ ಬಳಸಿಕೊಂಡನಾದ್ದರಿಂದ, ತನಿಖೆಯಲ್ಲಿ ಇವರ ಹೆಸರೂ ಸೇರಿಕೊಂಡಿತು. ಅಂತೂ ಒಮ್ಮೆ ಅದರಿಂದ ಪಾರಾದರೂ ಇವರ ಮನಸ್ಸಿಗೆ ಹುರಹುರಿಯಾಯಿತು. ಮುಂದೆ ಕೆಲವು ದಿನಗಳ

ಲ್ಲಿಯೆ ಹೆಂಡತಿ ವಿಷಮಜ್ವರದಿಂದ ತೀರಿಕೊಂಡಳು. ಆಗ ಲಂಚದ ಪಾಪವೇ ತಟ್ಟಿತೆಂದು ಚಿಮ್ಮಲಗಿಯವರಿಗೆ ಅನಿಸಿತು. ಮಗುವನ್ನು ಊರಿನಲ್ಲಿ ಬಿಟ್ಟು ಬಂದು ಪುನಃ ನೌಕರಿಗೆ ಹಾಜರಾದರು.

ತಿಂಗಳೊಪ್ಪತ್ತಿನಲ್ಲಿ ಮರುಮದುವೆಯೂ ಆಯಿತು. ಹೊಸ ಹೆಂಡತಿ ಯೊಡನೆ, ಆಕೆಯ ಅಣ್ಣತಮ್ಮಂದಿರು ವಿದ್ಯಾಭ್ಯಾಸಕ್ಕಾಗಿಯೂ, ಆಕೆಯ ತಾಯಿ ಆಸರೆಗೆಂದೂ ಇವರಲ್ಲಿಯೇ ಇದ್ದರು. ಆ ವೇಳೆಗೆ ವೇದವ್ಯಾಸನ ಶಿಕ್ಷಣ ಮುಗಿದಿತ್ತಾದ್ದರಿಂದ, ಅವನನ್ನೂ ಕರೆಸಿಕೊಂಡರು. ಆರೇಳು ಜನರ ಸಂಸಾರವು ರೂ.೨೩-೧-೬ರ ತಿಂಗಳ ಪಗಾರದಲ್ಲಿ ಸಾಗಬೇಕು. ಹಣದ ಅಡಚಣೆ ಎದ್ದು ಹೊಡೆಯುತ್ತಿತ್ತು. ಹೈದರಾಬಾದಿನಲ್ಲಿ ಆಗ ಹಾಲು-ಹೈನ ಯಥೇಚ್ಛ ವಾಗಿ ಸಿಗುತ್ತಿದ್ದರೂ, ಒಂದು ತಂಬಿಗೆ ಮಜ್ಜಿಗೆಯಲ್ಲಿ ಎರಡು ಹೊತ್ತಿನ ಎಲ್ಲರ ಊಟ ಕೊನೆಗೊಳ್ಳುತ್ತಿತ್ತು. ಚಿಮ್ಮಲಗಿಯವರು ಪುನಃ 'ಫೋಟೊ ಗ್ರಾಫರ್' ಬೋರ್ಡನ್ನು ಹೊರತೆಗೆದರು! ಇನಾಮಿಯಾ ಬಜಾರಿನ ಒಂದು ಮಳಿಗೆಯಲ್ಲಿ ಆರಂಭಿಸಿದರು (೧೯೧೮). ಹಗಲು ಹೊತ್ತಿನಲ್ಲಿ ಅವರ ತಮ್ಮನೂ, ಹೆಂಡತಿಯ ಅಣ್ಣನೂ ನೋಡಿಕೊಳ್ಳುತ್ತಿದ್ದರು. ಸಂಜೆ ಕಚೇರಿಯ ಕೆಲಸ ಮುಗಿದೊಡನೆ ಅಂಗಡಿಯಲ್ಲಿ ಇವರ ಹಾಜರಿ.

ಈ 'ಚಿಮ್ಮಲಗಿಕರ ಬ್ರದಸ್' ಅಂಗಡಿಯಿಂದ ಹೇಳಿಕೊಳ್ಳುವಂತಹ ಗಳಿಕೆ ಏನೂ ಇರಲಿಲ್ಲ. ಇಂಥ ಅಂಗಡಿಗಳು ಇನ್ನೂ ಹಲವಾರು ಆ ನಗರದಲ್ಲಿ ಇದ್ದೇ ಇದ್ದುವು. ಮೇಲಾಗಿ ಫೋಟೊಗ್ರಾಫಿ ರಸಾಯನಗಳ ಗುಟ್ಟು ಅವರಿಗೆ ಆಗೂ ತಿಳಿದಿರಲಿಲ್ಲ. ವ್ಯವಹಾರ ಹಾಗೂ ಹೀಗೂ ಸಾಗಿದ್ದಿತು. ಆದರೆ ಈ ಉದ್ಯಮದ ಪ್ರಯೋಜನವನ್ನು ಬೇರೊಂದು ರೀತಿಯಿಂದ ಮಾಡಿಕೊಳ್ಳುವ ವಿಚಾರ ಅವರಿಗೆ ಹೊಳೆಯಿತು.

ಈಗಿನಂತೆ ಆಗ ಫೋಟೊಗ್ರಾಫಿ ಸಾಮಾನುಗಳು ಸುಲಭವಾಗಿ ದೊರೆ ಯುತ್ತಿರಲಿಲ್ಲ; ಸಿಕ್ಕಾಪಟ್ಟೆ ಬೆಲೆಗಳು. ಈ 'ಸ್ಟುಡಿಯೋ'ದ ಧಂದೆಗಿಂತ ಫೋಟೊಗ್ರಾಫಿಯ ಕಚ್ಚಾ ಸಾಮಗ್ರಿಗಳನ್ನು ಖರೀದಿಸಿ, ಮರು ಮಾರಾಟ ಮಾಡಿದರೆ ಹೇಗೆ? ಎಂದು ಯೋಚಿಸಿದರು. ಸ್ನೇಹಿತರೊಬ್ಬರಿಂದ ೫೦೦ ರೂ.

ಸಾಲ ಪಡೆದರು ; ಹೆಂಡತಿಯ ಆಭರಣಗಳನ್ನು ಒತ್ತೆ ಹಾಕಿದರು. ಮುಂಬಯಿ ಯಲ್ಲಿದ್ದ ಪಿಸ್ತಮಜಿ ಎಂಬ ಪಾರ್ಸಿ ಅಂಗಡಿಯಲ್ಲಿ ಫಿಲ್ಮ್. ಕೆಮಿಕಲ್ಸ್ ಮುಂತಾದ್ದನ್ನು ಖರೀದಿಸುತ್ತ ಮರುಮಾರಾಟಕ್ಕೆ ತೊಡಗಿದರು. ಈ ವಸ್ತು ಗಳ ನಿಯಮಿತ ಹಾಗೂ ಯೋಗ್ಯ ಬೆಲೆಯ ಪೂರೈಕೆಯಿಂದಾಗಿ ವ್ಯವಹಾರ ಕುದುರಿತು, ಪೋಲೀಸ ನೌಕರಿಗೆ ರಾಜೀನಾಮೆಯಿತ್ತರು.

ವ್ಯಾಪಾರವೆಂದರೆ ಹಣ ಹಾಕಿ, ಹಣ ಜಮಾಯಿಸುವಂಥ ಧಂದೆ ತಾನೇ. ಹಣ ಜಮೆ ಆದ ಹಾಗೆಲ್ಲ ಪ್ರತಿನಿತ್ಯ ರಘುನಾಥಮಲ್ ಎಂಬವರ ಖಾಸಗೀ ಬ್ಯಾಂಕಿನಲ್ಲಿ ಜಮೆ ಮಾಡುತ್ತಿದ್ದರು. ಬ್ಯಾಂಕಿನಿಂದ ಇವರಿಗೆ ಬೇಕೆಂದಾಗ ಓವರ್‌ಡ್ರಾಫ್ಟ್ ಸಿಕ್ಕುತ್ತಿತ್ತು. ಇತ್ತ ಪೂರೈಕೆದಾರರಲ್ಲಿ ಖಾತೆ ಬಾಕಿ ಇರಿಸಿ, ಸಾಮಗ್ರಿಯನ್ನು ಪಡೆಯುವುದು ಸುಲಭ ಸಾಧ್ಯವಾಯಿತು. ಹೈದರಾಬಾದ್ ನಗರವನ್ನು ದಾಟಿ, ನಿಜಾಮ ರಾಜ್ಯದ ಬೇರೆ ಪ್ರದೇಶಗಳಿಗೂ ಅವನ್ನು ಪೂರೈಸತೊಡಗಿದರು. ಆಗ ಅವರಿಗೆ ಇನ್ನೊಂದು ವಿಚಾರ ಹೊಳೆಯಿತು. ಎಷ್ಟೆಂದರೂ ಪಿಸ್ತಮಜಿ ಮತ್ತಿತರರು ಉತ್ಪಾದಕರಿಂದ ವಸ್ತುಗಳನ್ನು ಪಡೆದು ವಿಕ್ರಯಿಸುವ ಠೋಕದಾರರು. ತಾವು ಉತ್ಪಾದಕರೊಡನೆಯೆ ನೇರವಾಗಿ ಏಕೆ ವ್ಯವಹರಿಸಬಾರದು ? ಅದರಂತೆ ಇಲ್ಫರ್ಡ್, ಕೊಡೆಕ್ ಮುಂತಾದ ತಯಾರಿಕಾ ಕಂಪನಿಯೊಡನೆ ಸಂಪರ್ಕವಿಟ್ಟುಕೊಂಡರು, ಪ್ರಾಮಾಣಿಕ ವ್ಯವ ಹಾರಸ್ಥರೆಂದು ಅದಾಗಲೇ ಹೆಸರು ಗಳಿಸಿದ್ದರಿಂದ ಚಿಮ್ಮಲಗಿಯವರಿಗೆ ಅವ ಗೊಡನೆ ವ್ಯಾಪಾರವನ್ನು ನಿರ್ವಹಿಸುವುದು ಕಷ್ಟವಾಗಲಿಲ್ಲ. ಕೆಲಕಾಲದ ಅನಂತರ ಕೊಡೆಕ್‌ದವರು ಇಡೀ ನಿಜಾಮ ರಾಜ್ಯದಲ್ಲಿಯ ವ್ಯವಹಾರದ ಸಂಪೂರ್ಣ ಹಕ್ಕನ್ನು ವಹಿಸಿಕೊಟ್ಟರು. ವಿದೇಶದಿಂದಲೂ, ಕೆಮರಾ ಮತ್ತಿತರ ವಸ್ತುಗಳನ್ನು ತರಿಸುವಷ್ಟು ಚಿಮ್ಮಲಗಿಯವರ ಉದ್ಯಮವು ಪ್ರವೃದ್ಧಮಾನ ವಾಯಿತು. ವ್ಯಾಪಾರವನ್ನು ಕುದುರಿಸುವಲ್ಲಿ ಅವರ ಒಂದು ವಿಧಾನವೆಂದರೆ "ಕ್ಯಾಮೆರಾ ಕೊಂಡುಕೊಳ್ಳಿ, ನಾವು ನಿಮಗೆ ಪುಕ್ಕಟೆ ಫೋಟೊಗ್ರಾಫಿ ಕಲಿಸು ವೆವು" ಎಂಬುದು. ಫೋಟೊಗ್ರಾಫಿ ವಸ್ತುಗಳಲ್ಲದೆ, ಗ್ರಾಮೊಫೋನ್, ರೇಡಿಯೊ, ಬಲ್ಬ ಮತ್ತಿತರ ವಸ್ತುಗಳ ಮಾರಾಟವನ್ನೂ ಕೈಕೊಂಡರು. ಈ ಮಧ್ಯೆ ನೆರೆಯ ಸಿಕಂದರಾಬಾದಿನಲ್ಲಿ ತಮ್ಮನಿಗೆಂದು ಬೇರೊಂದು ಅಂಗಡಿ

ಯನ್ನು ಸ್ಥಾಪಿಸಿ ಅವರಿಗೇ ಬಿಟ್ಟುಕೊಟ್ಟರು. ಅಲ್ಲಿಯೂ ವ್ಯಾಪಾರೀ ಯಶಸ್ಸು ದೊರಕಿತು. ಇಂತು ಕೆಲವೇ ವರ್ಷಗಳ ಅವ್ಯಾಹತ ಪರಿಶ್ರಮದಿಂದ ಚಿಮ್ಮಲಗಿಯವರು ಹೈದರಾಬಾದಿನ ಓರ್ವ ಗಣ್ಯ ವ್ಯಾಪಾರಸ್ಥರೆನಿಸಿದರು. ಹೊಸದಾಗಿ ವ್ಯಾಪಾರ ಮಾಡಬಯಸುವವರಿಗೆ ಚಿಮ್ಮಲಗಿಯವರು ಉಪದೇಶಿಸುತ್ತಿದ್ದ ಒಂದು ಮಾತೆಂದರೆ: "ವ್ಯಾಪಾರ ಬೆಳೆಸಲು ದೊಡ್ಡ ಬಂಡವಲೇನೂ ಬೇಡ. ಸರಕಿನ ಪೂರೈಕೆದಾರ, ಅದರಂತೆ ಗ್ರಾಹಕರ ವಿಶ್ವಾಸವನ್ನು ಕಾಯ್ದುಕೊಳ್ಳಬೇಕು, ಜೊತೆಗೆ ವೆಚ್ಚದಲ್ಲಿ ಹಿಡಿತಬೇಕು." ಈ ಮಾತು ಅವರ ಸ್ವಾನುಭವದ್ದೇ ಆಗಿತ್ತು.

ಅವರ ವ್ಯವಹಾರದ ಯಶಸ್ಸಿನ ದ್ಯೋತಕವೆಂದು, ಗ್ರಾಮೊಫೋನ್ ರೆಕಾರ್ಡುಗಳ ಮಾರಾಟವನ್ನು ಎತ್ತಿಹೇಳಬಹುದು. ಗ್ರಾಮೊಫೋನ್ ಹಾಡುಗಳು ಅದೇ ತಾನೇ ಪ್ರಸಿದ್ಧಿಗೆ ಬಂದಿದ್ದವು. ಚಿಮ್ಮಲಗಿಯವರು ಅವು ಹೊರಬಂದಂತೆಲ್ಲ. ಪ್ರತಿಯೊಂದು ರೆಕಾರ್ಡನ್ನೂ ತರಿಸುತ್ತಿದ್ದರು. ಅತ್ಯಂತ ಆಕರ್ಷಕ ರೀತಿಯಲ್ಲಿ ಅವನ್ನು ಪ್ರದರ್ಶನಕ್ಕಿಡುತ್ತಿದ್ದರು. ಅದರಲ್ಲಿ ಭಾಷಾವಾರು ವಿಂಗಡನೆ ಬೇರೆ. ಕನ್ನಡ ರೆಕಾರ್ಡುಗಳನ್ನು ಕನ್ನಡಿಗರಿಗೆ ಕೇಳಿಸುವದಕ್ಕಾಗಿ, ತಮ್ಮ ಊರಿನ ರೈತನೊಬ್ಬನ ಚಾಲಾಖ್ ಹುಡುಗನನ್ನು ಅಂಗಡಿಯಲ್ಲಿ ಇರಿಸಿಕೊಂಡಿದ್ದರು. ರೆಕಾರ್ಡುಗಳ ಖರೀದಿ-ವಿಕ್ರಯವಷ್ಟೇ ಅಲ್ಲ, ಕೆಲವು ಹಾಡುಗಳನ್ನು ಸೂಚಿಸಿ, ತಯಾರಿಸಲು ಹೇಳುತ್ತಿದ್ದರು. ಅವುಗಳ ಬೇಡಿಕೆಯ ಸಂಖ್ಯೆಯನ್ನು ಮನದಂದು, ಆಗಲೇ ಮುಂಗಡ ಆರ್ಡರ್ ಕೊಡುತ್ತಿದ್ದರು! ಇಂಥವುಗಳಲ್ಲಿ ಮಕ್ಕಳ 'ಮಾರ್ಚಿಂಗ್ ಸಾಂಗ್' ಒಂದು. ಅದರ ಹಾಡನ್ನು ಸೂಚಿಸಿ ಹೈದರಾಬಾದಿನ ಸಂಸ್ಥಾನದಲ್ಲಿ ಅವುಗಳ ವಿತರಣೆಗಾಗಿ ೧,೦೦೦ ರೆಕಾರ್ಡುಗಳ ಆರ್ಡರ್ ಮುಂಚಿತವಾಗಿ ಕೊಟ್ಟಾಗ ಕಂಪನಿಯವರು ಬೆರಗಾಗಿ ಬಿಟ್ಟರಂತೆ! 'ಗಾನದೋಸೆ'ಗಳು ಎಂಬ ಪದವನ್ನು ಅನೇಕರು ಕೇಳಿರಬಹುದು. ರೆಕಾರ್ಡುಗಳಿಗೆ ಎಷ್ಟೊಂದು ಸಮರ್ಪಕವಾದ ಹೆಸರು! ಅದನ್ನು ಸೃಷ್ಟಿಸಿ ರೂಢಿಯಲ್ಲಿ ತಂದವರು ಚಿಮ್ಮಲಗಿಯವರೇ ಎಂದು ಹೇಳಲಾಗುತ್ತಿದೆ.

ಇಂಗ್ಲೀಶ್ ಕಲಿಯಲು ಅವರು ಧಾವತಿ ಪಟ್ಟದ್ದನ್ನೂ ಅದು ಕೈಗೂಡದಿದ್ದದ್ದನ್ನೂ ಈ ಹಿಂದೆ ವಿವರಿಸಿದ್ದೇವೆ. ಮುಂದೂ ಅವರು ಇಂಗ್ಲೀಶ್

ಭಾಷೆಯ ಜ್ಞಾನವಿಲ್ಲದೇ, ತಮ್ಮ ಉದ್ಯಮವನ್ನು ಇಷ್ಟರ ಮಟ್ಟಿಗೆ ಬೆಳಸಿದರು. ಒಮ್ಮೆ ಅವರು ಮದ್ರಾಸಿಗೆ ಹೋಗಿದ್ದರು, ಅಲ್ಲಿಯ ಗ್ರಾಮೊಫೋನ್ ಕಂಪನಿಯ ಮ್ಯಾನೇಜರರನ್ನು ಕಂಡಾಗ. ಆತ "ಕಂಪನಿಯ ಡೈರೆಕ್ಟರರು ಕಲಕತ್ತೆಯಿಂದ ಬಂದಿದ್ದಾರೆ. ನೀವು ಬಂದದ್ದನ್ನು ತಿಳಿಸಿದೆ, ನಿಮ್ಮನ್ನು ಭೆಟ್ಟಿಯಾಗಲು ಉತ್ಸುಕರಾಗಿದ್ದಾರೆ" ಎಂದನು. ಅದಕ್ಕೆ ಇವರು "ಆತ ಯುರೋಪಿಯನ್ ಸಾಹೇಬ, ನನಗೆ ಇಂಗ್ಲೀಶ್ ಏನೂ ಬಾರದು" ಎಂದರು. ಆ ಭೆಟ್ಟಿಯಲ್ಲಿ ಮದ್ರಾಸ ಮ್ಯಾನೇಜರನು ದುಭಾಷಿಯಾಗಿ ಕೆಲಸ ಮಾಡಿದಾಗ, ಕಲಕತ್ತೆಯ ಸಾಹೇಬನು "ಅರೆ ! ಇಂಗ್ಲೀಶ್ ಬಾರದೇನೆ ಇವರು ನಮ್ಮೊಟ್ಟಿಗೆ ಇಷ್ಟೊಂದು ವ್ಯವಹಾರವನ್ನು ಮಾಡಿದ್ದೆಂದರೆ ಅಚ್ಚರಿಯೇ ಸೈ" ಎಂದು ಉದ್ಗಾರವೆತ್ತಿದನಂತೆ. ಸುರುವಿಗೆ ಅವರ ತಮ್ಮ ವೇದವ್ಯಾಸರು ಇಂಗ್ಲೀಶ್ ಪತ್ರವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು. ಅವರು ಸಿಕಂದರಾಬಾದಿನಲ್ಲಿ ಪ್ರತ್ಯೇಕ ವ್ಯವಹಾರದಲ್ಲಿ ತೊಡಗಿದ ಮೇಲೆ, ಇವರು ಇಂಗ್ಲೀಶ್ ಬಲ್ಲ ಓರ್ವ ಕಾರಕೂನನಿಂದಲೇ ಕೆಲಸ ಸಾಗಿಸುತ್ತಿದ್ದರು. ವ್ಯವಹಾರದ ಮಾರ್ಗದರ್ಶನ ಎಂತಿದ್ದರೂ ಇವರದೇ ತಾನೇ.



## ೨

ಇನ್ನೀಗ ಚಿಮ್ಮಲಗಿಯವರ ಸಾಂಸ್ಕೃತಿಕ ಕಾರ್ಯವನ್ನು ಗಮನಿಸೋಣ. ಅದರ ಮಹತ್ವವನ್ನು ಅರಿಯಬೇಕಾದರೆ, ಆಗಿನ ಹೈದರಾಬಾದಿನಲ್ಲಿ ಕನ್ನಡದ ಸ್ಥಿತಿ-ಗತಿ ಏನಿತ್ತೆಂಬುದನ್ನು ತಿಳಿದಿರುವುದು ಅವಶ್ಯ. ಹೈದರಾಬಾದ ಕರ್ನಾಟಕದ (ಕಲಬುರ್ಗಿ. ರಾಯಚೂರು, ಬೀದರ ಜಿಲ್ಹೆಗಳಿಂದ ಕೂಡಿದ್ದು) ಪೂರ್ವೇತಿಹಾಸದಲ್ಲಿ ನೃಪತುಂಗ, ಪಂಪರಂತಹ ಮಹಾವಿಭೂತಿಗಳು ರಾರಾಜಿಸಿದ್ದಾರೆ. ವೀರಶೈವಕ್ರಾಂತಿಯ ತಾಯ್ನೆಲೆಯಾಗಿದ್ದ ಕಲ್ಯಾಣವು ಇಲ್ಲಿಯದೇ. ಪ್ರಾರಂಭದ ವಚನಕಾರರಲ್ಲಿ ಬಹುಸಂಖ್ಯಾಕರು ಇಲ್ಲಿಯವರೇ ಆಗಿದ್ದರು. ದಾಸಸಾಹಿತ್ಯದ ದ್ವಿತೀಯ ಘಟ್ಟ ಎಂದರೆ ವಿಜಯದಾಸರಿಂದ ಮೊದಲ್ಗೊಂಡು. ಅನಂತರದ ಪೀಳಿಗೆಯ ಅನೇಕರು ರಾಯಚೂರು ಕಲಬುರ್ಗಿಗಳಿಂದಲೇ ಬಂದವರು. ಮುಂದೆ, ಕರ್ನಾಟಕದಲ್ಲಿ ಇತರತ್ರ ಆದಂತೆ, ೧೯ನೆಯ ಶತಮಾನದ ಮಧ್ಯಕಾಲದಲ್ಲಿ ಕನ್ನಡವು ಇಲ್ಲಿ ಗತಪ್ರಾಣವಾಗಿದ್ದಿತು. ಆ ಮುಂದಿನ ಕಾಲದಲ್ಲಿ ಅಂದರೆ ಕ್ರಿ. ಶ. ಸು. ೧೯೨೦ರ ವರೆಗೆ, ಕರ್ನಾಟಕದ ಇತರ ಪ್ರದೇಶಗಳಲ್ಲಿ ಕನ್ನಡಾಭಿಮಾನವು ತುಸುವಾದರೂ ತಲೆದೋರಿತ್ತು, ಆದರೆ ಇಲ್ಲಿ ಅಭಿಮಾನದ ಮಾತಿರಲಿ, ಕನ್ನಡದ ಅಸ್ತಿತ್ವವೇ ಇದ್ದಿಲ್ಲವೆನ್ನುವ ಸ್ಥಿತಿ ಇದ್ದಿತು.

ನಾಡಿನ ಇತರ ಭಾಗಗಳಲ್ಲಿ, ರಾಜಭಾಷೆಯಾಗಿ ಇಂಗ್ಲೀಶ್ ಮತ್ತು ನೆರೆಹೊರೆಯ ಭಾಷೆಯಾಗಿ ಮರಾಠಿ, ತೆಲುಗು ಅಥವಾ ಮಲೆಯಾಳೀ—ಇವುಗಳ ಪ್ರಭಾವದಲ್ಲಿ ಕನ್ನಡವು ತೆರೆಯ ಹಿಂದೆ ಸರಿದಂತಾಗಿದ್ದರೆ, ಹೈದರಾಬಾದದಲ್ಲಿ ಇಂಗ್ಲೀಶ್‌ನ ಜೊತೆಗೆ ಉರ್ದು ಕೂಡ ರಾಜಭಾಷೆಯಾಗಿ ಮೆರೆಯುತ್ತಿತ್ತು. ಅಲ್ಲದೆ ಹೈದರಾಬಾದಿನವರ ಮಾತೃಭಾಷೆಯಾದ ತೆಲುಗಿನ ಹಿಡಿತವೂ ಕನ್ನಡದ ಮೇಲೆ ಇರಬೇಕಲ್ಲ. ಅದರೆ ಕನ್ನಡಿಗರ ಮಟ್ಟಿಗೆ ತೆಲುಗಿಗಿಂತ ಮರಾಠಿಯ ಕಾಲ್ತುಳಿತವು ಆ ನಗರದಲ್ಲಿ ಹೆಚ್ಚಾಗಿ ಇದ್ದಿತು. ಜೊತೆಗೆ ಅಲ್ಲಿಯ ಮರಾಠಿಗರಿಗೆ ಕನ್ನಡದ ಬಗ್ಗೆ ತೀರ ಅಸಹ್ಯ. "ಈ ಕಾನಡೀ ಮಂದಿಗೆ ನೆಟ್ಟಗೆ ಅಳಲಿಕ್ಕೆ ಸಹಿತ ಬರುವದಿಲ್ಲ. ಮೊದಲು ಅಳಲಿಕ್ಕೆ ಕಲೀಲಿ" ಎಂಬುದಾಗಿ ಹೀಗಳೆಯುವದನ್ನು ಚಿಮ್ಮಲಗಿಯವರು ಹೈದರಾಬಾದಿಗೆ ಬಂದ ಹೊಸತರಲ್ಲಿ ಕೇಳಿದ್ದರು.

ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಕನ್ನಡಕ್ಕೆ ಒಂದಿಷ್ಟು ಅವಕಾಶವಿದ್ದಿದ್ದರೆ, ಆಮೇಲಾದರೂ ಕನ್ನಡವು ತಲೆ ಎತ್ತಬಹುದಿತ್ತೇನೊ. ಶಾಲಾ ಸ್ಥಾಪನೆಯು ಸಂಪೂರ್ಣವಾಗಿ ಸರಕಾರದ ಕಕ್ಷೆಯಲ್ಲಿದ್ದದ್ದರಿಂದ ಯಾರೂ ಖಾಸಗಿಯಾಗಿ ಶಾಲೆಗಳನ್ನು ತೆರೆಯುವಂತಿರಲಿಲ್ಲ. ರಾಯಚೂರು ಮತ್ತು ಕಲಬುರ್ಗಿ ಮುಂತಾದ ಕೆಲವೇ ಸ್ಥಳಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಸರಕಾರವು ಸ್ಥಾಪಿಸಿದ್ದರೂ ಹೆಚ್ಚಿನ ಕನ್ನಡಿಗರು ಉರ್ದೂ ಇಲ್ಲವೆ ಮರಾಠೀ ಶಾಲೆಗಳಿಗೇ ತಮ್ಮ ಮಕ್ಕಳನ್ನು ಕಳಿಸಲು ಇಷ್ಟಪಡುತ್ತಿದ್ದರು. ಬೀದರ ಭಾಗದಲ್ಲಂತೂ ಕನ್ನಡವನ್ನು ಕೇಳುವವರೇ ಇರಲಿಲ್ಲ. ಮಿಶನರಿ ಜನರು ನಡೆಸುತ್ತಿದ್ದ ಒಂದು ಶಾಲೆಯು ಹೊರತು ಬೇರೆ ಕನ್ನಡ ಶಾಲೆ ಇರಲಿಲ್ಲ. ಕನ್ನಡಿಗರು ತಮ್ಮ ಮಕ್ಕಳನ್ನು ಮರಾಠಿ ಶಾಲೆಗೇ ಕಳಿಸುತ್ತಿದ್ದರು-ಖುಶಿಯಿಂದ ಅನೇಕಾನೇಕ ವ್ಯಾಪಾರಸ್ಥ ಕನ್ನಡಿಗರು ಲೆಕ್ಕಪತ್ರ ಇಡುತ್ತಿದ್ದರು. ಮರಾಠಿಯಲ್ಲಿ, ಸಾರ್ವಜನಿಕ ಪ್ರಸಿದ್ಧಿಯ ಕನ್ನಡಿಗರು ಸಾರ್ವಜನಿಕ ಸಭೆ ಇಲ್ಲವೆ ಕ್ಲಬ್ಬುಗಳಿದ್ದಾಗ ಕನ್ನಡದಲ್ಲಿ ಮಾತನಾಡುವುದು ಹೀನಾಯವೆಂದು ಬಗೆಯುತ್ತಿದ್ದರು. ಹೈಸ್ಕೂಲು, ಕಾಲೇಜುಗಳ ಮೆಟ್ಟಿಲು ಹತ್ತಿದವರಿಗೆ ಇಂಗ್ಲೀಶ್, ಉರ್ದುಗಳೇ ವ್ಯವಹಾರ ಭಾಷೆಗಳಾಗಿದ್ದವು. ಅಂತೂ ಹೈದರಾಬಾದ ಸಂಸ್ಥಾನದಲ್ಲಿ ಕನ್ನಡಿಗರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆಂಬುದು ಬೇರೆ ಭಾಷಿಕರ ಗಮನಕ್ಕೇ ಬಾರದಂತೆ ಅಲ್ಲಿಯ ಕನ್ನಡಿಗರ ವರ್ತನೆ ಇದ್ದಿತು. (ಇತರತ್ರವೂ ಕನ್ನಡಿಗರ ನಡತೆ ಇದೇ ಬಗೆಯುದಲ್ಲವೆ ! ).

ಕನ್ನಡಿಗರು ಹೆಚ್ಚಿನ ಸಂಖ್ಯೆಯಲ್ಲಿರುವ ರಾಯಚೂರು, ಕಲಬುರ್ಗಿ ಜಿಲ್ಹೆಗಳಲ್ಲಿಯೇ ಈ ಸ್ಥಿತಿ ಇರುವಾಗ ಹೈದರಾಬಾದ ನಗರದಲ್ಲಿ ಕನ್ನಡವನ್ನು ಕೇಳುವವರಾರು? ೧೯೨೦ ನೆಯ ದಶಕದಲ್ಲಂತೂ ಒಂದಾದರೂ ಕನ್ನಡ ಶಾಲೆ ಆ ನಗರದಲ್ಲಿ ಇರಲಿಲ್ಲ. ಅಂತೂ ಕನ್ನಡವು ಅಲ್ಲಿಯ ಬಡ ಕನ್ನಡಿಗರ ಅಡಿಗೆಯ ಮನೆ, ಮಲಗುವ ಕೋಣೆಗಳನ್ನು ಬಿಟ್ಟು ಹೊರಗೆ ಬರುತ್ತಲೇ ಇರಲಿಲ್ಲ ! ಇಂಥ ಬರಡು ವಾತಾವರಣದಲ್ಲಿ ಚಿಮ್ಮಲಗಿಯವರು ಕನ್ನಡದ ಸಸಿಯನ್ನು ಅಲ್ಲಿ ಊರಿದರು. ಮುಂದಿನ ಕೆಲವು ವರ್ಷಗಳವರೆಗೆ ಏಕೈಕರಾಗಿ ಅದನ್ನು ಪೋಷಿಸಿಕೊಂಡು ಬಂದರು.

ಕನ್ನಡಾಭಿಮಾನವು ಅದರಲ್ಲಿ ಜನ್ಮಗುಣವಾಗಿ ಇದ್ದಿತಾದರೂ, ಅಂಥ ಚಟುವಟಿಕೆಗಳನ್ನು ಕೈಗೊಳ್ಳಲು, ೧೯೨೪ರ ಅಖಿಲಭಾರತ ಕಾಂಗ್ರೆಸ್ ಅಧಿವೇಶನದ ನಿಮಿತ್ತವಾಗಿ ಬೆಳಗಾವಿಗೆ, ಅನಂತರ ಧಾರವಾಡಕ್ಕೆ ಹೋಗಿ ಬಂದಾಗ ಪ್ರೇರಣೆ ದೊರಕಿತು. ಕಾರ್ಯಾರಂಭ ಮಾಡಿದ್ದರ ಸಂದರ್ಭ ಮಾತ್ರ ಮೋಜಿನದಾಗಿದೆ.

ಚಿಮ್ಮಲಗಿಯವರ ಹಿರಿಯ ಮಗ ರಾಮನಿಗೆ ೧೦-೧೨ ವರ್ಷ ಇದ್ದೀತು. ಗಾಂಧೀಜಿಯವರಿತ್ತ ಕರೆಯಿಂದಾಗಿ, ಸ್ವದೇಶೀ ವ್ರತಕ್ಕೆ ಅಂಟಿಕೊಂಡು, ಧಾರವಾಡದ ರಾಷ್ಟ್ರೀಯ ವಿದ್ಯಾಲಯಕ್ಕೆ ತಮ್ಮ ಮಗನನ್ನು ಕಳಿಸಿಕೊಟ್ಟರು. ಆದರೆ ಅಷ್ಟರಲ್ಲಿ ಆ ಶಾಲೆಯನ್ನು ಮುಚ್ಚಿದ್ದರಿಂದ ಹೈದರಾಬಾದಿನಲ್ಲಿಯೇ ಅವನ ಶಿಕ್ಷಣವು ಮೊದಲಾಯಿತು. ವಿದೇಶವಾದದ್ದು ಯಾವದೂ ಬೇಡವೆಂಬ ಕಾರಣದಿಂದ, ಮಗನನ್ನು ಇಂಗ್ಲೀಶ್ ಶಾಲೆಗೆ ಹಾಕದೇ ಮರಾಠೀ ಮಾಧ್ಯಮದ ಹೈಸ್ಕೂಲನ್ನು ಆಯ್ದುಕೊಂಡರು. ತಮ್ಮ ವ್ಯವಹಾರದಿಂದಾಗಿ ಇವರಿಗೆ ಹಗಲಿನಲ್ಲಿ ಪುರಸೊತ್ತು ಸಿಗುತ್ತಿದ್ದುದು ಕಡಿಮೆ. ಅಂಥದೊಂದು ದಿನ ಅವನು ಪುಸ್ತಕ ಹಿಡಿದುಕೊಂಡು ಕುಳಿತಾಗ, "ಏನಪಾ ರಾಮಾ, ಒಂದಷ್ಟು ಗಟ್ಟಿಯಾಗಿ ಓದು, ನೋಡುವಾ" ಎಂದು ಹೇಳಿದರು. ಎದುರಿಗೇ ಪುಸ್ತಕವಿದ್ದರೂ ಹುಡುಗ ಮೌನಿ! ಕೆದರಿ ಕೇಳಿದಾಗ ತಾನು ಓದಲಾರೆನೆಂದೂ ಮಾಸ್ತರರು ಶಾಲೆಯಲ್ಲಿ ಹೇಳಿದ್ದು ತನಗೆ ತಿಳಿದಿಲ್ಲವೆಂದೂ ಅಳುಮುಖದಿಂದ ಹೇಳಿದನು. ಏನೂ ತಿಳಿಯದ ಮರಾಠಿಗಿಂತ ವಿದೇಶೀ ಭಾಷೆಯೇ ವಾಸಿ ಎಂದುಕೊಂಡು, ಆ ಶಾಲೆಯನ್ನು ಬಿಡಿಸಿ, ಇಂಗ್ಲೀಶ್ ಮಾಧ್ಯಮದ ಶಾಲೆಗೆ ಹಾಕಿದರು.

'ನನ್ನ ಮಗನಿಗೆ ಒದಗಿದಂಥ ಸ್ಥಿತಿ ಅನೇಕಾನೇಕ ಕನ್ನಡ ಬಾಲಕರಿಗೆ ಇದ್ದಿರಬೇಕಲ್ಲವೆ?' ಎಂದು ಅವರ ಮನಸ್ಸು ಮಿಡುಕಿತು. ಹೇಗಾದರೂ ಮಾಡಿ ಒಂದು ಕನ್ನಡ ಶಾಲೆಯನ್ನು ತೆರೆಯಬೇಕು, ಪ್ರಾಥಮಿಕ ವರ್ಗಗಳಿಂದ ಆರಂಭಿಸಬೇಕು ಎಂದು ನಿರ್ಧರಿಸಿದರು. ೧೯೨೮ರಂದು ರಥಸಪ್ತಮಿಯ ದಿನ ಐದು ಬಾಲಕರನ್ನು ಕರೆತಂದು ಆರಂಭಮಾಡಿಬಿಟ್ಟರು!

ಶಾಲೆಗೆ ಏನೆಂದು ಹೆಸರು ಕೊಡಬೇಕು? ಅಂಗಡಿಯಲ್ಲಿ ಸ್ನೇಹಿತರೊಡನೆ ಕುಳಿತಾಗ ಚಿಮ್ಮಲಗಿಯವರು ಅದರ ಪ್ರಸ್ತಾಪ ಮಾಡಿದರು. ಆಗ ಲಕ್ಷ್ಮಣರಾವ ಚಳಗೇರಿ ಎಂಬವರು ನೃಪತುಂಗನ ಹೆಸರನ್ನು ಸೂಚಿಸಿದರು. 'ನೃಪತುಂಗ ವಿದ್ಯಾಲಯ'ವೆಂಬ ಹೆಸರು ಇಂದಿಗೂ ಉಳಿದು ಶಾಲೆ ಊರ್ಜಿತ ಸ್ಥಿತಿಯಲ್ಲಿದೆ. ಈಗೀಗ ಅದು ಮಹಾವಿದ್ಯಾಲಯವಾಗಿದೆ.

ಹುಡುಗರ ಸಂಖ್ಯೆ ಐದೇ ಇರಲಿ, ಶಾಲೆ ಎಂದ ಮೇಲೆ ಒಬ್ಬ ಶಿಕ್ಷಕರು ಬೇಕಲ್ಲ. ಸರಿ, ಹಂಜಕ್ಕಿ ಗುಂಡಾಚಾರ್ಯ ಎಂಬ ಸ್ಥಳೀಯರನ್ನು ನೇಮಿಸಲಾಯಿತು. ಶಾಲೆಯು ಚಿಮ್ಮಲಗಿಯವರ ಮನೆಯ ಒಂದು ಭಾಗದಲ್ಲಿ ನಡೆಯುತ್ತಿತ್ತು. ಬೆರಳೆಣಿಕೆಯ ಸಂಖ್ಯೆಯಲ್ಲಿರುವ ಮತ್ತು ನೆಲದ ಮೇಲೆ ಕುಳಿತು 'ಅ ಆ ಇ ಈ' ತೀಡುತ್ತಿದ್ದ ಬಾಲಕರ ಈ ಶಾಲೆಯನ್ನು ನೋಡಿದವರಿಗೆಲ್ಲ ನಗೆಚಾಟಕೆಯ ವಿಷಯವಾಯಿತು, ಚಿಮ್ಮಲಗಿಯವರು ಅದನ್ನು ಲಕ್ಷಿಸದೆ, ಭೆಟ್ಟಿಯಾದ ಎಲ್ಲ ಕನ್ನಡಿಗರಿಗೂ ಮಕ್ಕಳನ್ನು ಇಲ್ಲಿಗೆ ಕಳಿಸಲು ಹೇಳುತ್ತಿದ್ದರು. ಶಿಕ್ಷಕನ ಪಗಾರವನ್ನು ಚಿಮ್ಮಲಗಿಯವರೇ ಕೈಯಿಂದ ಕೊಡುತ್ತಿದ್ದರು. ಶಿಕ್ಷಣವು ಉಚಿತವಾಗಿದ್ದಿತೆಂದು ಬೇರೆ ಹೇಳಬೇಕಿಲ್ಲ.

ಮರು ವರುಷಕ್ಕೆ ಶಾಲಾ ಮಕ್ಕಳ ಸಂಖ್ಯೆ ೨೫ಕ್ಕೆ ಏರಿತು. ಶ್ರೀ ನರಸಿಂಹ ಭಟ್ಟ ಎಂಬ ಇನ್ನೊಬ್ಬ ಶಿಕ್ಷಕರನ್ನು ನೇಮಿಸಿದರು. ಬೆಂಚು ಮೇಜುಗಳಿಲ್ಲದಿದ್ದರೆ ಶಾಲೆಗೆ ಮರ್ಯಾದೆ ಬಾರದೆಂದು, ಅವನ್ನು ತಾವೇ ಮಾಡಿಸಿದರು. ಹೆಚ್ಚೆಚ್ಚು ಪಾಲಕರು ತಮ್ಮ ಮಕ್ಕಳನ್ನು ಕಳಿಸುವಂತಾಗಬೇಕಾದರೆ ಸರಕಾರದ ಮನ್ನಣೆ ಇರಬೇಕು ಎಂಬುದನ್ನು ಮನಗಂಡು, ಎಜ್ಯುಕೇಶನಲ್ ಇನಸ್ಪೆಕ್ಟರರಿಗೆ ಅರ್ಜಿಯನ್ನು ಸಲ್ಲಿಸಿದರು. ಇಪ್ಪತ್ತು ಸಾವಿರ ಕನ್ನಡಿಗರಿರುವ ಹೈದರಾಬಾದ ನಗರದಲ್ಲಿ ಒಂದಾದರೂ ಕನ್ನಡ ಶಾಲೆ ಇಲ್ಲವೆಂಬ ಮಾತನ್ನು ಅದರಲ್ಲಿ ಎತ್ತಿ ಹೇಳಲಾಗಿತ್ತು. ಹಲವು ತಿಂಗಳುಗಳು ಸಂದರೂ ಆ ಅರ್ಜಿಯು ಶಿಕ್ಷಣ ಕಚೇರಿಯಲ್ಲೇ ಕೊಳೆಯುತ್ತ ಬಿದ್ದಿತ್ತು.

ಆಗೊಂದು ವಿಚಿತ್ರ ಘಟನೆ ಜರುಗಿತು. ಶ್ರೀ ಚಿಮ್ಮಲಗಿಯವರು ತಮ್ಮ ಅಂಗಡಿಯ ಕಟ್ಟೆಯ ಮೇಲೆ ಕುಳಿತಿದ್ದಾಗ ಅವರ ನಾಲ್ಕು ವರ್ಷದ ಮಗು

ರಾಘವೇಂದ್ರ ಆಡುತ್ತ ರಸ್ತೆಗೆ ಇಳಿದ. ಅಷ್ಟರಲ್ಲಿ ಒಂದು ಕಾರು ಬಂದು ಮಗುವಿನ ಮೇಲೆ ಹಾಯ್ದು ಹೋಯಿತು. ಕಾರನ್ನು ನಡೆಸುವವನು ಹಾಗೇ ಪಲಾಯನ ಮಾಡದೆ ಪಕ್ಕನೆ ಕಾರನ್ನು ನಿಲ್ಲಿಸಿದರು. ಆಗೇನೆ ಚಿಮ್ಮಲಗಿಯವರಿಗೆ ಅಪಘಾತವಾಯಿತೆಂದು ತಿಳಿದದ್ದು. ಕೂಡಲೇ ಧಾವಿಸಿ, ಗಾಲಿಯ ಕೆಳಗೆ ಸಿಕ್ಕಿಬಿದ್ದ ಮಗುವನ್ನು ಎತ್ತಿಕೊಂಡರು. ಮಗುವಿನ ಮೈಮೇಲೆ ಎಚ್ಚರವಿರಲಿಲ್ಲ. ಅಷ್ಟರಲ್ಲಿ ಗಾಡಿಯಲ್ಲಿದ್ದವರೂ ಕೆಳಗಿಳಿದು ಬಂದು, ಅದೇ ಕಾರಿನಲ್ಲಿ ಎಲ್ಲರೂ ರೆಸಿಡೆನ್ಸಿ ದವಾಖಾನೆಗೆ ಧಾವಿಸಿದರು. ಚಿಮ್ಮಲಗಿಯವರು ತಮ್ಮ ಮಗುವಿನ ಬಗ್ಗೆ ಕಾತರವನ್ನು ವ್ಯಕ್ತಪಡಿಸಿದರಲ್ಲದೇ 'ನೀವು ಅಲಕ್ಷ್ಯದಿಂದ ಡ್ರೈವ್ ಮಾಡಿದಿರಿ' ಎಂಬ ಸಿಟ್ಟನ್ನು ತೋರ್ಪಡಿಸಿರಲಿಲ್ಲ. ಮಗುವನ್ನು ಪರೀಕ್ಷಿಸಿದ ಡಾಕ್ಟರರು "ಗಾಯವೇನೂ ಆಗಿಲ್ಲ, ಗಾಬರಿಯಿಂದ ಮಗುವಿಗೆ ಎಚ್ಚರ ತಪ್ಪಿದೆ" ಎಂದು ಹೇಳಿದಾಗ, ಅವರಿಬ್ಬರಿಗೂ ಆದ ಸಂತೋಷ ಅಷ್ಟಿಷ್ಟಲ್ಲ.

ಪರಸ್ಪರ ಪರಿಚಯದ ಕಾಲಕ್ಕೆ ಚಿಮ್ಮಲಗಿಯವರಿಗೆ ಅವರು 'ಅಲಿ ಅಕಬರ್' ಎಂಬುದು ಗೊತ್ತಾಗಿ ಆಶ್ಚರ್ಯವೇ ಆಯಿತು. "ನೀ-ನೀವು ಎಜುಕೇಶನಲ್ ಇನಸ್ಪೆಕ್ಟರ್ ಅಲಿ ಅಕಬರ್ ಸಾಹೇಬರೇನು ?" ಎಂದರು.

"ಹೌದು,"

"ಇದೇನು ಯೋಗಾಯೋಗ? ನಾನು ತಮ್ಮನ್ನು ಕನ್ನಡ ಶಾಲೆಯ ಸಂಬಂಧದಲ್ಲಿ ಭೆಟ್ಟಿಯಾಗಬೇಕೆಂದು ಬರುವವನೇ ಇದ್ದೆನಲ್ಲ, ತಮ್ಮ ಅನುಕೂಲದ ಸಮಯವನ್ನು ತಿಳಿದುಕೊಳ್ಳುವದಕ್ಕಾಗಿ, ಮಿತ್ರರೊಬ್ಬರಿಗೆ ಹೇಳಿ ಇಟ್ಟಿದ್ದೆ" ಎಂದರು ಚಿಮ್ಮಲಗಿಯವರು.

ಮರುವಾರವೇ ಎಜುಕೇಶನ್ ಆಫೀಸಿನಿಂದ ಪತ್ರ ಬಂತು-ಸಾಹೇಬರು ಶಾಲೆಯ ವಿಜಿಟ್‌ಗೆ ಬರಲಿದ್ದಾರೆಂದು ! ಆ ಸಮಯಕ್ಕೆ ಸರಕಾರದ ಹಿರಿಯ ಅಧಿಕಾರಿಯೊಬ್ಬರು ಇದ್ದರೆ ಒಳ್ಳೆಯದೆಂದು ಯೋಚಿಸಿ, ಸಂಸ್ಥಾನದ ವೆಟರಿನರಿ ಖಾತೆಯ ಮುಖ್ಯಾಧಿಕಾರಿಗಳಾಗಿದ್ದ ಡಾ. ಬಿ.ಕೆ, ಬದಾಮಿ ಎಂಬ ಕನ್ನಡಿಗರನ್ನು ಬರಮಾಡಿಕೊಂಡಿದ್ದರು. ಅಲಿ ಅಕಬರ ಸಾಹೇಬರು ಬಂದು ಹೋದ ಕೂಡಲೇ ಶಾಲೆಗೆ ಸರಕಾರದ ಮಂಜೂರಾತಿ ಸಿಕ್ಕಿತು.

ಮುಂದೆ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ತೀವ್ರ ಹೆಚ್ಚಳ ಕಂಡುಬಂತು. ಮೂರನೆಯ ಶಿಕ್ಷಕನು ಹಾಜರಾದನು. ಗ್ರ್ಯಾಂಟ್ ಕೂಡ ಮಂಜೂರಾಯಿತು. ಎಷ್ಟು ಎಂದು ಭಾವಿಸಿದಿರಿ? ೨೦ ರೂ.! ಉಳಿದೆಲ್ಲ ವೆಚ್ಚವನ್ನು ಚಿಮ್ಮಲಗಿಯವರೇ ಭರಿಸುತ್ತಿದ್ದರು. ೪ನೆಯ ಇಯತ್ತೆಯು ಆರಂಭವಾಗುವವರೆಗೂ ಶಾಲೆಯು ಚಿಮ್ಮಲಗಿಯವರ ಮನೆಯಲ್ಲಿ ನಡೆಯುತ್ತಿದ್ದಿತು. ಬಿಂದಾಚಾರ್ಯ ಪುರೋಹಿತ ಎಂಬವರು ಹೆಡ್‌ಮಾಸ್ತರ್ ಆಗಿ ಬಂದಮೇಲೆ ದೊಡ್ಡ ಸ್ಥಳವೊಂದನ್ನು ಬಾಡಿಗೆಗೆ ಹಿಡಿದರು. ಆಗೂ ಶಾಲೆಯ ಆರ್ಥಿಕ ನಿರ್ವಹಣೆ ಚಿಮ್ಮಲಗಿಯವರದೇ ಆಗಿ ಮುಂದುವರಿಯಿತು. ಬೇರೆ ಉದಾರಿಗಳಿಂದ ಧನಸಹಾಯವನ್ನು ಕೇಳಬಾರದೆಂದೇನೂ ಅವರು ಇಟ್ಟುಕೊಂಡಿದ್ದಿಲ್ಲ. ಆದರೆ ಅದಕ್ಕೆಂದು ಓಡಾಡಲು, ತಮ್ಮ ಬೆಳೆಯುತ್ತಿದ್ದ ವ್ಯವಹಾರದಲ್ಲಿ ವೇಳೆ ಸಿಗುತ್ತಿರಲಿಲ್ಲ. ವೆಚ್ಚವೋ ಅವರ ಎಣಿಕೆಯನ್ನು ಮೀರಿ ಹೆಚ್ಚಾಗುತ್ತ ನಡೆದಿತ್ತು. ಆದರೂ ನೂರಕ್ಕೆ ಮೇಲ್ಪಟ್ಟು ಕನ್ನಡ ಮಕ್ಕಳು ಓದುತ್ತಿರುವುದು ಅವರಿಗೆ ತುಂಬಾ ಸಂತೋಷದ ಸಂಗತಿಯಾದ್ದರಿಂದ ಹಣದ ಹೊರೆಯನ್ನು ಸಂತೋಷದಿಂದಲೆ ಹೊತ್ತರು.

ಆಗ ಹೈದರಾಬಾದಿನಲ್ಲಿ ವಿವೇಕವರ್ಧಿನಿ ವಿದ್ಯಾಲಯ ಎಂಬ ಮರಾಠೀ ಶಾಲೆಯು ವಿಶೇಷ ಪ್ರಸಿದ್ಧಿಯನ್ನು ಪಡೆದಿತ್ತು. ಅಲ್ಲಿ ಕನ್ನಡ ಹುಡುಗರು ಸಾಕಷ್ಟು ಜನ ಇದ್ದು, ಅವರೆಲ್ಲ ಮರಾಠೀ ಮಾಧ್ಯಮದಲ್ಲಿ ಕಲಿಯಬೇಕಾಗಿತ್ತು. ಆದರೂ ಕನ್ನಡವನ್ನು ಒಂದು ವಿಷಯವನ್ನಾಗಿ ಕಲಿಸಲೆಂದು ಓರ್ವ ಕನ್ನಡ ಶಿಕ್ಷಕನನ್ನು ನೇಮಿಸಲಾಗಿತ್ತು. ಆ ಶಾಲೆಯ ಮುಖ್ಯಸ್ಥರಾಗಿದ್ದ ಶ್ರೀ ವಾಮನ ನಾಯಕರು ನಗರದ ಓರ್ವ ಗಣ್ಯವ್ಯಕ್ತಿಗಳೆನಿಸಿಕೊಂಡಿದ್ದರು. 'ದೇಶಭಕ್ತ', 'ಧರ್ಮವೀರ' ಮುಂತಾದ ಗೌರವ ಪದವಿಯನ್ನು ಹೊಂದಿದ್ದ ಅವರು ಮೂಲತಃ ಕನ್ನಡಿಗರೇ ಆಗಿದ್ದರೂ ಮರಾಠಿಗೆ ಸಂಪೂರ್ಣ ಮಾರುಹೋಗಿದ್ದರು. ಚಿಮ್ಮಲಗಿಯವರಿಗೆ ಅವರು ಅಪರಿಚಿತರೇ.

ತಮ್ಮ ಕನ್ನಡ ಶಾಲೆಯ ಆದರಂತೆ, ಇಲ್ಲಿಯ ಕನ್ನಡ ವಿದ್ಯಾರ್ಥಿಗಳು ಸೇರಿದರೆ ಕನ್ನಡ ಮಾಧ್ಯಮದ ಒಂದು ಹೈಸ್ಕೂಲನ್ನು ತೆರೆಯಬಹುದೆಂಬ ಕನಸನ್ನು ಚಿಮ್ಮಲಗಿಯವರು ಕಾಣತೊಡಗಿದರು. ಆ ಮುಂಚೆ ವಿವೇಕವರ್ಧಿನಿ

ವಿದ್ಯಾಲಯದಲ್ಲಿ ಕನ್ನಡ ಮಕ್ಕಳು ಅದೆಷ್ಟು ಜನ ಇದ್ದಾರೆಂಬುದರ ಅಂದಾಜು ಬೇಕಲ್ಲವೆ. ಈ ವಿಷಯವನ್ನು ಕುರಿತು ಚಿಮ್ಮಲಗಿಯವರು ಶ್ರೀ ವಾಮನ ನಾಯಕರನ್ನು ಭೆಟ್ಟಿಯಾಗಿ ವಿಚಾರಿಸಿದರು. ಪ್ರತ್ಯೇಕ ಹೈಸ್ಕೂಲಿನ ವಿಚಾರ ನಾಯಕರಿಗೆ ಸ್ವಾಭಾವಿಕವಾಗಿಯೆ ಬೇಡವಾದದ್ದು, ಅದರಿಂದ ತಮ್ಮ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಾಗುವದಲ್ಲವೆ. "ಕನ್ನಡ ಹುಡುಗನ ಸಂಖ್ಯೆ ಬೇಕಿದ್ದರೆ, ಮನೆಮನೆಗೆ ಹೋಗಿ ಖಾನೇಸುಮಾರಿ ತೆಗೆದುಕೊಳ್ಳಿ" ಎಂದು ಒದರಾಡಿದರು.

ಚಿಮ್ಮಲಗಿಯವರಿಗೆ ಸಾತ್ವಿಕ ಸಂತಾಪ ಉಕ್ಕೇರಿತು. ಆ ಮಾಹಿತಿಯನ್ನು ದೊರಕಿಸಲೇಬೇಕೆಂಬ ಛಲ ಹೊಕ್ಕಿತು. ತಮ್ಮ ವ್ಯವಹಾರದ ನಿಮಿತ್ತ ಒಮ್ಮೆ ಮದ್ರಾಸಿಗೆ ಹೋದಾಗ ಎರಡು ಸಾವಿರದಷ್ಟು 'ನೋಟ್‌ಬುಕ್' ಗಳನ್ನು ತಂದು, ಕಡಿಮೆ ಬೆಲೆಗೆ ಮಾರುಮಾರಾಟಕ್ಕೆಂದು ಇಟ್ಟರು. ಇದು ನಿಮಿತ್ತ ಮಾತ್ರ, ಜೊತೆಗೆ "ಕನ್ನಡ ಮಾತನಾಡುವ ಹುಡುಗರಿದ್ದರೆ, ಅವರಿಗೆ ಪುಕ್ಕಟೆ" ಎಂದು ಜಾಹೀರುಪಡಿಸಿದರು !

ಶಾಲಾರಂಭದ ದಿನಗಳವು, ವಿವೇಕವರ್ಧಿನಿ ಶಾಲೆಯ ಹತ್ತಿರ ಇವರ ಅಂಗಡಿ ಇದ್ದಿತಾದ್ದರಿಂದ ಅಲ್ಲಿಯ ಹುಡುಗರು ಕಡಿಮೆ ಬೆಲೆಗೆ ಇದ್ದ 'ನೋಟ್ ಬುಕ್' ಕೊಳ್ಳಲು ಬರತೊಡಗಿದರು. ಇತ್ತ "ನನಗೆ ಕನ್ನಡ ಬರ್‍ತದೆ" ಎಂದು ಹೇಳುವ ಮಕ್ಕಳು ಒಂದು ರಿಜಿಸ್ಟರಿನಲ್ಲಿ ತಮ್ಮ ಹೆಸರು, ವಿಳಾಸ ಮತ್ತು ತಾವು ಕಲಿಯುವ ವರ್ಗ ಇಷ್ಟನ್ನು ಬರೆಯಬೇಕಾಗುತ್ತಿತ್ತು, ಹಾಗೆ ಖುಶಿಯಿಂದ ಬರೆದು ಪುಸ್ತಕಗಳನ್ನು ಪುಕ್ಕಟೆ ಒಯ್ಯುತ್ತಿದ್ದರಲ್ಲ. ಅಂತೂ ಆ ತಿಂಗಳಾವಧಿಯಲ್ಲಿ ಚಿಮ್ಮಲಗಿಯವರು ಹತ್ತಿಪ್ಪತ್ತು ಅಲ್ಲ, ಸುಮಾರು ೧೫೦ ರಷ್ಟು ಕನ್ನಡ ಬಲ್ಲ ವಿದ್ಯಾರ್ಥಿಗಳ ಪಟ್ಟಿಯನ್ನು ಅವರವರ ತರಗತಿಯ ಉಲ್ಲೇಖದೊಡನೆ ಶ್ರೀ ವಾಮನ ನಾಯಕರ ಮುಖಕ್ಕೆ ಹಿಡಿದರು. ಅದಕ್ಕೆ ನಾಯಕರು ಅಸಹಾಯತೆಯ ಬೇಸರವನ್ನು ತೋರ್ಪಡಿಸಿವರಲ್ಲದೆ, ಇನ್ನೇನು ಹೇಳಬಹುದಾಗಿತ್ತು ? ಆದರೆ ಅವರಿಗೆ ತಮ್ಮಲ್ಲಿದ್ದ ಕನ್ನಡ ಶಿಕ್ಷಕ ಹಾಗೆ ಮಾಡಿರಬಹುದೆಂಬ ಸಂಶಯ ಬಂತು. ಅದಕ್ಕಾಗಿ ಅವನನ್ನು ಪೀಡಿಸಿದಾಗ ಚಿಮ್ಮಲಗಿಯವರು ತಾವು ಹೂಡಿದ ತಂತ್ರವನ್ನು ತಿಳಿಯಪಡಿಸಿದರು. ಇವ

ರಿಂದ ಶ್ರೀ ವಾಮನ ನಾಯಕರಿಗೆ, ಚಿಮ್ಮಲಗಿಯವರ ವಿಷಯದಲ್ಲಿ ಗೌರವ ಹೆಚ್ಚಿತೆಂದೇ ಹೇಳಬೇಕು.

ಏನೇ ಆಗಲಿ ಚಿಮ್ಮಲಗಿಯವರಿಗೆ, ಆ ಪಟ್ಟಿಯು ಮಿಡ್ಲ್‌ಸ್ಕೂಲ್ ತೆರೆಯುವುದಕ್ಕೆ ಪುಟಕೊಟ್ಟಿತು. ಇಂಗ್ಲೀಶ್ ಮೂರನೆಯ ವರ್ಗದವರೆಗೆ ನೃಪತುಂಗ ವಿದ್ಯಾಲಯವು ಮುಂದುವರಿಯಿತು. ಅದನ್ನು ಮಿಡ್ಲ್‌ಸ್ಕೂಲ್ ಎಂದು ಮಂಜೂರು ಮಾಡಿಸಿಕೊಳ್ಳುವುದಕ್ಕೆ ಓರ್ವ ಗ್ರ್ಯಾಜುಯೇಟ್ ಹೆಡ್ ಮಾಸ್ತರನ ಆವಶ್ಯಕತೆ ಇದ್ದಿತು. ವಿಜಾಪುರದ ಶ್ರೀ ವೆಂಕಟರಾವ್ ನಾಯಿಕ ಎಂಬ ಪದವೀಧರರನ್ನು ಕರೆಯಿಸಿಕೊಂಡರು. ಎಜ್ಯುಕೇಶನ್ ಆಫೀಸಿನಲ್ಲಿದ್ದ ಹಿತಚಿಂತಕರೊಬ್ಬರು 'ಉರ್ದು ಕಲಿಸಲು ಒಬ್ಬ ಮುಸಲ್ಮಾನರನ್ನು ಶಿಕ್ಷಕ ನನ್ನಾಗಿ ನೇಮಿಸಿಕೊಳ್ಳಿರಿ' ಎಂದು ಕಿವಿಮಾತು ಹೇಳಿದ್ದರಿಂದ, ಹಾಗೆಯೂ ಮಾಡಿದರು. ನೇಮಿಸಿದುದು ಮತ್ತಾರನ್ನೂ ಅಲ್ಲ, ಗುಳೇದಗುಡ್ಡದಲ್ಲಿ ತಾವು ಉರ್ದು ಕಲಿಸುತ್ತಿದ್ದ ಶಾಲೆಯಿಂದ ನಿವೃತ್ತರಾಗಿದ್ದ ಸೈಪುದ್ದೀನರನ್ನು !

ಈ ಎತ್ತುಗಡೆಗಳಿಂದ ಶಾಲೆಯ ಗ್ರ್ಯಾಂಟ್ ಹೆಚ್ಚಾಯಿತೆಂಬುದು ನಿಜ. ಆದರೆ ಅದೆತ್ತ ಸಾಲಬೇಕು ? ೨೫೦ ಮಕ್ಕಳಿದ್ದ ಆ ಶಾಲೆಯ ಯೋಗಕ್ಷೇಮ ವನ್ನು ಹೆಚ್ಚಿನ ಮಟ್ಟಿಗೆ ಒಬ್ಬರೇ ಹೊತ್ತಿದ್ದ ಚಿಮ್ಮಲಗಿಯವರಿಗೆ, ಅದರಿಂದ ಮುಕ್ತರಾಗಬೇಕೆಂದು ತೋರಿದ್ದರೆ ಅದು ಸಹಜವೇ. ಶಾಲೆಯ ಆಗುಹೋಗು ಗಳನ್ನು ನೋಡಿಕೊಂಡು ಹೋಗಲು ಸಮಿತಿಯೊಂದನ್ನು ರಚಿಸಿದರು. ಅದರ ಅಧ್ಯಕ್ಷರಾದ ಶ್ರೀ ಜನಾರ್ದನರಾವ ದೇಸಾಯಿ ಅವರಿಗೆ ಆಡಳಿತವನ್ನು ಒಪ್ಪಿಸಿ ದರು. ಜನಾರ್ದನರಾಯರು ಕಲಬುರ್ಗಿಯನ್ನು ಬಿಟ್ಟು ಆ ವೇಳೆಗೆ ಹೈದರಾ ಬಾದಿನಲ್ಲಿ ವಕೀಲಿ ವೃತ್ತಿಯಲ್ಲಿ ತೊಡಗಿದ್ದರು. ನಿಷ್ಠಾವಂತ ಸಮಾಜಸೇವಕ ರೆಂದು ಹೆಸರು ಪಡೆದಿದ್ದರು. ಶಾಲೆಯ ಆಡಳಿತದ ಹೊಣೆಯನ್ನು ಹೀಗೆ ಒಪ್ಪಿಸಿಕೊಡುವಾಗ, ಬೆಳೆದ ಮಗಳನ್ನು ಬೀಳ್ಕೊಟ್ಟ ಭಾವನೆ, ಚಿಮ್ಮಲಗಿ ಯವರಲ್ಲಿ ಮೂಡಿರಲು ಸಾಕು.

ಇತ್ತ ವೆಂಕಟರಾವ ನಾಯಿಕರ ದಕ್ಷ ಆಡಳಿತದಿಂದಾಗಿ ಶಾಲೆಯಲ್ಲಿ ಶಿಸ್ತು ನೆಲೆಸಿತು. ಪಾಠಗಳಲ್ಲಿ ವ್ಯವಸ್ಥಿತ ಕ್ರಮವೇರ್ಪಟ್ಟಿತು. ಹುಡುಗರು ಉತ್ತಮ

ದರ್ಜೆಯಲ್ಲಿ ಪಾಸಾಗುತ್ತಿದ್ದರು. ಈ ಮಿಡ್ಲ್‌ಸ್ಕೂಲಿನಿಂದ ಬೇರೆ ಯಾವುದೇ ಹೈಸ್ಕೂಲಿಗೆ ಹೋಗುವುದಾದರೆ ಈ ಶಾಲೆಯ ಹುಡುಗರಿಗೆ ಪ್ರಾಶಸ್ತ್ಯ ದೊರೆಯುವಷ್ಟು, ನೃಪತುಂಗ ವಿದ್ಯಾಲಯವು ಹೆಸರನ್ನು ಗಳಿಸಿತು. ಮುಂದೆ, ಚಿಂಚೋಳಿಯ ಕೃಷ್ಣಾಚಾರ್ಯ ಜೋಶಿ—ಎಂಬ ವಕೀಲರು, ಈ ಶಾಲೆಯ ಯಶಸ್ವಿತೆಯಿಂದ ಪ್ರೇರಿತರಾಗಿ, 'ಕರ್ನಾಟಕ ಶಾರದಾ ಕನ್ಯಾ' ಪಾಠಶಾಲೆಯನ್ನು ಆರಂಭಿಸಿದರು. ಎರಡೂ ಶಾಲೆಗಳು ಕರ್ನಾಟಕ ಶಿಕ್ಷಣ ಸಮಿತಿ ಎಂಬ ಹೆಸರಿನ ಸಂಸ್ಥೆಯ ಕೆಳಗೆ ಕೆಲಸ ಮಾಡುತ್ತಿವೆ.

ಲೋಕಮಾನ್ಯ ಟಿಳಕರು ಮಹಾರಾಷ್ಟ್ರದಲ್ಲಿ ಆರಂಭಿಸಿದ ಗಣೇಶೋತ್ಸವಗಳ ಮೂಲಕವಾದ ಸಾರ್ವಜನಿಕ ಜಾಗೃತಿಯ ಕಾರ್ಯವು ನೆರೆಯ ನಿಜಾಮ ರಾಜ್ಯಕ್ಕೂ ಹಬ್ಬಿದ್ದಿತು. ಇಂಥ ಉತ್ಸವಗಳನ್ನು ನಡೆಸುವಲ್ಲಿ ಮರಾಠಿಗರು ಮುಂದಾಗುತ್ತಿದ್ದರು. ಹೈದರಾಬಾದದ ಕನ್ನಡಿಗರೂ ಹಾಗೆ ಯೋಚಿಸಿ 'ಕರ್ನಾಟಕ ಸಮಾಜ ಗಣಪತಿ ಉತ್ಸವ ಮಂಡಳಿ' ಎಂಬುದನ್ನು ಆರಂಭಿಸಿದ್ದರು, ಆದರೆ ಇದು ನಾಮಮಾತ್ರ ಮಂಡಳಿಯಾಗಿದ್ದಿತು, ಮತ್ತು ಕಾರ್ಯಕ್ರಮಗಳಲ್ಲಿ ಹುರುಳಿರಲಿಲ್ಲ.

ಚಿಮ್ಮಲಗಿಯವರು ಇದನ್ನು ಹೆಚ್ಚು ವ್ಯಾಪಕಗೊಳಿಸಿ ವ್ಯವಸ್ಥಿತವಾಗಿ ನಡೆಸಬೇಕೆಂದು ನಿರ್ಧರಿಸಿದರು. ಇವರು ಸಕ್ರಿಯವಾಗಿ ಭಾಗವಹಿಸಿದ ಮೊದಲನೆಯ ವರ್ಷ (೧೯೩೩) ಪ್ರೊ. ಡಿ. ಕೆ. ಭೀಮಸೇನರಾಯರನ್ನು ಮುಖ್ಯ ಅತಿಥಿಯೆಂದು ಬರಮಾಡಿಕೊಂಡರು. ಭೀಮಸೇನರಾಯರು ಮೈಸೂರಿನಲ್ಲಿ ಕನ್ನಡ ಎಂ.ಎ. ಮುಗಿಸಿ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಚಾರ್ಯರೆಂದು ಆಗ ನೇಮಕಗೊಂಡಿದ್ದರು. ಆ ಸಲದ ಉತ್ಸವದ ವಿಶೇಷ ಆಕರ್ಷಣೆಯೆಂದರೆ ಸಂಗೀತ ಮೇಳಾ. ಜೀವಣರಾವ ಮಾಸ್ತರ ಎಂಬ ಹಾರ್ಮೋನಿಯಮ್ ಶಿಕ್ಷಕರು ದೊರೆತು ಕಾರ್ಯಕ್ರಮಕ್ಕೆ ತುಂಬಾ ಕಳೆ ಬಂದಿತು. ಮುಖ್ಯವಾಗಿ ಆ ೩–೪ ದಿನದ ಕಾರ್ಯಕ್ರಮಗಳಿಗೆ ಹೆಚ್ಚೆಚ್ಚು ಕನ್ನಡಿಗರು ಬರತೊಡಗಿದರು.

ಎರಡನೆಯ ವರ್ಷ ಶಿ.ಶಾ. ಶರ್ಮರನ್ನು ಮುಖ್ಯ ಅತಿಥಿಗಳನ್ನಾಗಿ

ಬೆಂಗಳೂರಿನಿಂದ ಬರಮಾಡಿಕೊಂಡಿದ್ದಿತು. ಮೂರನೆಯ ವರ್ಷ ಕೆ. ಸಂಪದ್ಗಿರಿ ರಾಯರ ಆಗಮನ. ಹಿಂದಿನ ವರ್ಷಗಳಲ್ಲಿ ಈ ಉತ್ಸವವು ಇನಾಮಿಯಾ ಬಜಾರಿನ ಒಂದು ಕೊಠಡಿಯಲ್ಲಿ ನಡೆಯುತ್ತಿದ್ದಿತು. ಆ ಜಾಗ ಸಾಲದೆಂದು ಈ ಸಲ ಬೇರೆ ವಿಶಾಲ ಸ್ಥಳದಲ್ಲಿ ಕಾರ್ಯಕ್ರಮದ ಏರ್ಪಾಡಾಗಿದ್ದಿತು. ಸಂಪದ್ಗಿರಿರಾಯರ ವಾಗ್ವೈಖರಿಯನ್ನು ವಿವರಿಸಲಿಕ್ಕುಂಟೆ ? ಮರುದಿನ ವಿವೇಕವರ್ಧಿನಿ ಶಾಲೆಯ ವಾಮನ ನಾಯಕರು ತಮ್ಮಲ್ಲಿ ಭಾಷಣಮಾಡಲೆಂದು ಅವರನ್ನು ಆಮಂತ್ರಿಸಿದರು. ಆ ಅಸ್ಖಲಿತ ಭಾಷಣ ಕೇಳಿದ ಮೇಲೆ "ಅರೆ. ಕಾನಡೀ ಲೋಕಾಮಧೇ ಇತಕೆ ಚಾಂಗಲೆ ಬೋಲಣಾರೆ ವಕ್ತಾ ಆಹೇತ್ ಆಹೇತ್ ಕಾಯ್" ಎಂದು ಮರಾಠಿಗರು ಉದ್ಗಾರವೆತ್ತಿದರಂತೆ.

ಚಿಮ್ಮಲಗಿಯವರು ಇವೆಲ್ಲ ಕಾರ್ಯಕ್ರಮಗಳ ಹಿಂದಿನ ಸೂತ್ರಧಾರ ರಾಗಿದ್ದರು, ಕಾರ್ಯಕ್ರಮಗಳಿಗೆ ಹೆಚ್ಚು ಹೆಚ್ಚು ಜನ ಕನ್ನಡಿಗರು ಆಗಮಿಸುತ್ತ ಇದ್ದುದು ಅವರಿಗೆ ತುಂಬಾ ಸಂತೋಷವನ್ನುಂಟು ಮಾಡಿತ್ತು. ನಾಲ್ಕನೆಯ ಗಣೇಶೋತ್ಸವವನ್ನು ಗುಳೇಗುಡ್ಡ ಉಪನಗರದಲ್ಲಿ ನೆರವೇರಿಸಬೇಕೆಂದು ಯೋಚಿಸಿದಾಗ, ವಾಮನ ನಾಯಕರು "ನಾವು ಈಗಾಗಲೇ ಇಲ್ಲಿ ಗಣೇಶೋ ತ್ಸವವನ್ನು ಆಚರಿಸುತ್ತಿದ್ದೇವೆ. ನಮ್ಮೊಟ್ಟಿಗೆ 'ಕಾನಡೀ' ಬಂಧುಗಳೂ ಇದ್ದಾರೆ. ಬೇಕಾದರೆ ನೀವೂ ಸೇರಿಕೊಳ್ಳಿ. ಗಣೇಶನು ಎಲ್ಲರಿಗೂ ದೇವರು ತಾನೇ. ನೀವು ಪ್ರತ್ಯೇಕವಾಗಿ ಆಚರಿಸುವದಾದರೆ ಕನ್ನಡ-ಮರಾಠೀ ಭೇದದ ಬೀಜವನ್ನು ಬಿತ್ತಿದಂತಾಗುವುದು, ಇದನ್ನು ನಡೆಗೊಡುವುದಿಲ್ಲ. ಪರಸ್ಪರ ಜಗಳವಾಗಿ ಏನಾದರೂ ವಿಕೋಪಕ್ಕೆ ಹೋದರೆ ಅದಕ್ಕೆ ನೀವೇ ಜವಾಬು ದಾರರು" ಎಂದು ಮುಂತಾಗಿ ವಿರೋಧಿಸಿದರು.

ಗಣೇಶನೇನೊ ಎಲ್ಲರ ಪಾಲಿಗೆ ಸಮಾನ ದೇವರಿರಬಹುದು. ಆದರೆ ಕನ್ನಡತ್ವವನ್ನು ಬಿಂಬಿಸಿ, ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡಿ, ಅವರನ್ನು ಒಂದೆಡೆ ಸೇರಿಸುವದಕ್ಕೆ ಇದೊಂದು ಅವಕಾಶವೆಂಬುದಾಗಿ ಭಾವಿಸಿದ್ದ ಚಿಮ್ಮ ಲಗಿಯವರು ನಾಯಕರ ವಿರೋಧವನ್ನು ಗಣಿಸದೇ ಕಾರ್ಯಕ್ರಮವನ್ನು ನಡೆಸಿಯೇಬಿಟ್ಟರು. ಈ ಬಾರಿಗೆ ಸುವಿಖ್ಯಾತ ಕೀರ್ತನಕಾರರಾದ ಕೊಪ್ಪಳ ಜಯರಾಮಾಚಾರ್ಯರ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಆ ಮುಂಚೆ

ಮುಳಗುಂದ ರಾಮಾಶಾಸ್ತ್ರಿಗಳೆಂಬವರು ಕನ್ನಡದಲ್ಲಿಯೆ ಹರಿಕಥೆ ಹೇಳುತ್ತಿದ್ದರು. ಆದರೆ ಮಾತು ಮಾತಿಗೆ ಅವರು ಮಹಾರಾಷ್ಟ್ರ ಸಂತರ ಹಾಡುಗಳನ್ನು ಹೇಳುತ್ತಿದ್ದರಂತೆ. 'ಅದೇಕೆ?' ಎಂದು ಚಿಮ್ಮಲಗಿಯವರು ಪ್ರಶ್ನಿಸಿದಾಗ 'ಕರ್ನಾಟಕದಲ್ಲಿ ಅಂಥ ಮಹಾನುಭಾವರು ಇರುವರೆಲ್ಲಿ?' ಎಂದಿದ್ದರಂತೆ. ಜಯರಾಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ಕನ್ನಡ ದಾಸಾರ್ಯರ ಹಾಡುಗಳನ್ನೇ ಉದ್ಧರಿಸುತ್ತಿದ್ದರು. ಅದರ ಮುಂದಿನ ವರ್ಷದ ಗಣೇಶೋತ್ಸವವನ್ನು ತರುಣರಿಗೊಪ್ಪಿಸಿ, ಚಿಮ್ಮಲಗಿಯವರು, ಆರ್ಥಿಕ ಸಹಾಯ ಮಾಡುತ್ತ ಬೆಂಬಲಿಗರಾಗಿ ನಿಂತರು.

ಜಯರಾಮಾಚಾರ್ಯರ ಕೀರ್ತನೆಯಿಂದ ಸ್ಫೂರ್ತಿಗೊಂಡು ಆಗ ನೆರೆದಿದ್ದ ಕನ್ನಡಿಗರು, ನಗರದಲ್ಲಿ ಕರ್ನಾಟಕ ಸಂಘವೊಂದನ್ನು ಸ್ಥಾಪಿಸಲು ನಿರ್ಧರಿಸಿದರು. ಅದಕ್ಕೆ ಹೆಸರನ್ನು 'ಕರ್ನಾಟಕ ಸಾಹಿತ್ಯ ಮಂದಿರ' ಎಂದು ಇಡಲಾಯಿತು (೧೯೩೫). ಅದರ ಸ್ಥಾಪನೆಗೆ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ವಿಶೇಷವಾಗಿ ಶ್ರಮಿಸಿದ್ದರು. ಕನ್ನಡ ಶಾಲೆಯಂತೆ ಇದಕ್ಕಾದರೂ ಚಿಮ್ಮಲಗಿಯವರ ಮನೆಯೇ ಪ್ರಾರಂಭದ ಕಾರ್ಯಸ್ಥಳವಾಯಿತಲ್ಲದೆ ಅದರ ಬೆಳವಣಿಗೆಯುದ್ದಕ್ಕೂ ಅನನ್ವಿತವಾಗಿ ಸಹಾಯ ಸಲ್ಲಿಸಿದರು. ಸಾಹಿತ್ಯ ಮಂದಿರವು ಸಾಕಷ್ಟು ಪ್ರಬುದ್ಧಮಾನವಾದ ಮೇಲೆಯೇ ಬೇರೆಡೆಗೆ ಸ್ಥಳಾಂತರವಾಯಿತು. ಈ ಸಂಘದಂತೆಯೇ ಅವಶ್ಯವಾಗಿದ್ದದ್ದು ಒಂದು 'ಬುಕ್ ಡಿಪೊ' ಹಾಗೂ ಒಂದು ಕನ್ನಡ ಪ್ರೆಸ್. ಚಿಮ್ಮಲಗಿಯವರು ಅವನ್ನೂ ಅಸ್ತಿತ್ವದಲ್ಲಿ ತಂದರು. 'ಬುಕ್ ಡಿಪೊ' ಕೆಲವು ವರ್ಷ ನಡೆಯಿತಾದರೂ ಪ್ರೆಸ್ ಮಾತ್ರ ಅದನ್ನು ನಡೆಸಿಕೊಂಡು ಹೋಗುವವರಿಲ್ಲದೆ, ನಿಂತುಹೋಯಿತು.

ನಿಜವಾದ ಕನ್ನಡಾಭಿಮಾನವಿದ್ದರೆ ಅದು ಸಣ್ಣ ಪುಟ್ಟ ಅಂಶಗಳಲ್ಲಿಯೂ ಕಂಡುಬರುತ್ತದೆ. ವಿಶೇಷತಃ ಬೇರೆ ಭಾಷಿತರ ದಬ್ಬಾಳಿಕೆಗೆ ತುತ್ತಾಗ ಅದು ಇನ್ನಷ್ಟು ಪುಟಿದೇಳುತ್ತದೆ. ಚಿಮ್ಮಲಗಿಯವರ ಜೀವನದಲ್ಲಿ ಇಂಥ ಹತ್ತಾರು ಸಂಗತಿಗಳು ಜರುಗಿದುವು. ಅವರ ಅಂಗಡಿಯ ಹೆಸರು ಸುರುವಿಗೆ "ಚಿಮ್ಮಲಗಿಕರ ಬ್ರದರ್ಸ" ಎಂದು ಇದ್ದಿತು. ಮರಾಠಿಗಳ ಮನೋವೃತ್ತಿಯನ್ನು ತಿಳಿದ ಮೇಲೆ 'ಕರ್' ಎಂಬುದನ್ನು ತೊಡೆದುಹಾಕಿದರು. ಈ ಕುರಿತು ಮರಾಠಿ

ಗರನೇಕರು, ಅವರ ವ್ಯವಹಾರಕ್ಕೆ ಧಕ್ಕೆ ಬರುವಂತೆ ಅಪಪ್ರಚಾರ ಮಾಡಿದ ರಾದರೂ. ಯಾವ ದುಷ್ಪರಿಣಾಮವಂವೂ ಆಗಲಿಲ್ಲ.

ಗಡಕರಿಯವರ ಮರಾಠೀ ನಾಟಕ 'ಭಾವಬಂಧನ'ವನ್ನು ಒಮ್ಮೆ ಹೈದರಾಬಾದಿನಲ್ಲಿ ಪ್ರದರ್ಶಿಸಲಾಗುತ್ತಿತ್ತು. ನಾಟಕದಲ್ಲಿ "ಕನ್ನಡ ಭಾಷೆಯು ಗಡಗಿಯ ಒಳಗೆ ಬಗೆದ ಹರಳು ಸಪ್ಪಳ ಮಾಡಿದಂತೆ ಕೇಳಿಸುವದು", ಎಂಬ ಅವಹೇಳನೆಯ ಮಾತು ಬರುತ್ತದೆ. ರಂಗಪ್ರಯೋಗ ಕಾಲಕ್ಕೆ ಆ ಸಂದರ್ಭ ಬಂದಾಗಲೆಲ್ಲ ಪ್ರೇಕ್ಷಕರು ಘೊಳ್ಳೆಂದು ನಗುತ್ತಿದ್ದರು. ಚಿಮ್ಮಲಗಿಯವರು ಇನ್ನಿತರ ಕೆಲವು ಉತ್ಸಾಹಿಗಳೊಡನೆ ಸೇರಿಕೊಂಡು ಪ್ರತಿಭಟಿಸಿದರು. ಕಂಪನಿಯವರು ಮೊದಲಿಗೆ ಅದನ್ನು ಗಣನೆಗೆ ತರಲಿಲ್ಲ. ಆದರೆ ಪ್ರತಿಭಟನೆಯ ರಭಸವನ್ನು ಕಂಡು, ಆ ವಾಕ್ಯವನ್ನು ಕಿತ್ತುಹಾಕಲೇ ಬೇಕಾಯಿತು.

ನಿಜಾಮ ರಾಜ್ಯದ ಭೂಗೋಲನ್ನು ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ ಕಲಿಸುವಾಗ ಆದರಲ್ಲಿ ತೆಲಂಗಾಣ, ಮಹಾರಾಷ್ಟ್ರ ಎಂಬ ಎರಡೇ ಭಾಗಗಳನ್ನು ನಕಾಶದಲ್ಲಿ ತೋರಿಸಿ, ಅದರಂತೆ ಪಾಠಹೇಳುವ ಪರಿಪಾಠ ಬಿದ್ದು ಹೋಗಿತ್ತು. ಸಂಸ್ಥಾನದಲ್ಲಿ ಒಂದಲ್ಲ ಮೂರು ಜಿಲ್ಲೆಗಳು ಕನ್ನಡದವಷ್ಟೆ. ಈ ಲೋಪವನ್ನು ಶಿಕ್ಷಣಶಾಖೆಯ ಗಮನಕ್ಕೆ ತರಲಾಯಿತು, ಅದರ ಫಲವೇನೂ ದೊರೆಯಲಿಲ್ಲ. ಆಗ ಚಿಮ್ಮಲಗಿಯವರು ತಾವೇ ಬೇರೊಂದು ನಕಾಶವನ್ನು ಬರೆಸಿದರು. ಅದನ್ನು ವಿವಿಧ ಶಾಲೆಗಳಿಗೂ, ಪ್ರಮುಖ ಮರಾಠೀ ಬಾಂಧವರಿಗೂ, ಸರಕಾರೀ ಅಧಿಕಾರಿಗಳಿಗೂ, ಅದರಂತೆ ಕರ್ನಾಟಕದ ಒಳನಾಡಿನಲ್ಲಿಯೂ ಹಂಚಿದರು. ಅದರಿಂದ ಸಂಸ್ಥಾನದಲ್ಲಿಯ ಕನ್ನಡಿಗರ ಅಸ್ತಿತ್ವವು ಕನ್ನಡೇತರರಿಗೆ ಸ್ಪಷ್ಟವಾಗಿ ಗೋಚರಿಸುವಂತಾಯ್ತು.

ಸಿನೆಮಾಗಳು ಹೆಚ್ಚಾಗಿ ಬಳಕೆಯಲ್ಲಿರದ ಆಗಿನ ದಿನಗಳಲ್ಲಿ (೧೯೩೦ ನೆಯ ದಶಕ) ನಾಟಕಗಳೇ ಪ್ರಮುಖ ಮನರಂಜನ ಸಾಧನಗಳಾಗಿದ್ದುವು. ಶ್ರೀ ರಾ.ಭೀ. ಮಾನಸಬ್ದಾರ್ ಎಂಬವರು ಕನ್ನಡ ನಾಟಕಗಳನ್ನು ಪ್ರದರ್ಶಿಸಲೆಂದು ಹೈದರಾಬಾದಿಗೆ ಬಂದಾಗ, ಒಂದು ದಿವಸದ ಅವರ ಪ್ರದರ್ಶನ ವೆಚ್ಚವನ್ನು ತಾವೇ ವಹಿಸಿಕೊಂಡರು, ಮತ್ತು ಆ ದಿನದ ಪ್ರಯೋಗಕ್ಕೆ ಯಾವದೇ ಕನ್ನಡಿ

ಗನಿಗೆ ಉಚಿತ ಪ್ರವೇಶವೆಂದು ಸಾರಿದರು! ನೂರಾರು ಕನ್ನಡಿಗರು ಒಂದೆಡೆ ಸೇರುತ್ತಾರೆ ಎಂಬ ತೃಪ್ತಿಭಾವವೇ ಇದರ ಕಾರಣವಾಗಿದ್ದಿತು. ಒಳನಾಡಿನಿಂದ ಬಂದ ಕನ್ನಡಿಗರು, ಅವರ ಕಾರ್ಯವು ಯಾವ ಕ್ಷೇತ್ರದಲ್ಲೇ ಇರಲಿ, ನಿರಾಶ ರಾಗಿ ಹಿಂತಿರುಗಿ ಹೋಗಬಾರದಲ್ಲವೆ. ಚಿಮ್ಮಲಗಿಯವರ ಬದುಕಿನಲ್ಲಿ ಇಂಥ ಘಟನೆಗಳು ಇನ್ನೂ ಹಲವಾರು ನಡೆದುಹೋದುವು.

* * *

## ಒಂದು ಸಮಕಾಲೀನ ದಾಖಲೆ :

## ಶ್ರೀ ಭೀಮಾಚಾರ್ಯ ಚಿಮ್ಮಲಗಿ

ಇವರು ಹೈದರಾಬಾದಿಗೆ ಬಂದು ನೆಲಸಿ ಸುಮಾರು ಮೂವತ್ತು ವರ್ಷಗಳಾದುವು. ಮೊದಲು ಇಲ್ಲಿ ಪೋಲೀಸ ಖಾತೆಯಲ್ಲಿದ್ದರು. ಮುಂದೆ ಅದನ್ನು ಬಿಟ್ಟು ಗ್ರಾಮೊಫೋನು, ಫೋಟೊ ಮುಂತಾದ ವ್ಯಾಪಾರವನ್ನು ಆರಂಭಿಸಿ ಅದನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ. ಕನ್ನಡದ ಮುನ್ನಡೆಗೆ ಇವರ ಹಣ ಹೊಳೆಯಾಗಿ ಹರಿದಿದೆ. ಹೈದರಾಬಾದಿನಲ್ಲಿ ಕನ್ನಡದ ಸೊಲ್ಲು ಕೇಳಿಸುವಂತೆ ಮಾಡಿದ ಕೀರ್ತಿ ಇವರಿಗಿದೆ. ನೃಪತುಂಗ ಶಾಲೆ, ತರುಣರ ತಂಡ, ಕರ್ನಾಟಕ ಸಂಘ, ಕರ್ನಾಟಕ ಎಜ್ಯುಕೇಶನಲ್ ಸೊಸೈಟಿ ಮುಂತಾದ ಅನೇಕ ಕನ್ನಡ ಸಂಸ್ಥೆಗಳಿಗೆ ಉದಾರವಾದ ಪೋಷಣೆಯನ್ನಿತ್ತಿದ್ದಾರೆ. 'ಬೀದಿಯಲ್ಲಿ ಕನ್ನಡ ಮಾತನಾಡುವದಕ್ಕೆ ಅಂಜುವೆವು' ಎಂಬ ಜನರಿದ್ದ ಈ ಹೈದರಾಬಾದು ಕನ್ನಡದ ಒಂದು ಕೇಂದ್ರವಾದ ಯಶಸ್ಸು ಇವರಿಗೂ ಇದೆ. ಒಟ್ಟಾರೆ ಹೇಳುವದಾದರೆ ಹೈದರಾಬಾದಿನಲ್ಲಿ ಕನ್ನಡದ ಹೆಸರೆತ್ತಿದರೆ ಶ್ರೀ ಚಿಮ್ಮಲಗಿಯವರ ಹೆಸರು ಅದರೊಡನೆಯೇ ಇರುತ್ತದೆ.

('ಹೈದರಾಬಾದ ಕರ್ನಾಟಕ' ಪುಸ್ತಕದಿಂದ)
ಸಂಪಾದಕರು : ಆರ್. ಜಿ. ಜಾಗೀರದಾರ ಮತ್ತು ಲಿಂಗಸುಗೂರ ವಿಠಲರಾವ,
ಹೈದರಾಬಾದ-೧೯೪೧

೩

ಕ್ರಿ.ಶ. ೧೯೩೯ಕ್ಕೆ ಎಂದರೆ ಜಾಗತಿಕ ಮಹಾಯುದ್ಧಾರಂಭದ ಕಾಲಕ್ಕೆ ಚಿಮ್ಮಲಗಿಯವರಿಗೆ ೫೦ ವರ್ಷ ತುಂಬಿದುವು. ಇದನ್ನು ನಾವು ಅವರ ಜೀವನದ ತೃತೀಯ ಘಟ್ಟವೆಂದು ಕರೆಯಬಹುದು. ಈ ವೇಳೆಗೆ ಅವರ ಉದ್ಯಮವು ಅತ್ಯಂತ ಊರ್ಜಿತಾವಸ್ಥೆಯನ್ನು ಮುಟ್ಟಿತ್ತು. ಮಕ್ಕಳಿಬ್ಬರು ದೊಡ್ಡವರಾಗಿದ್ದರು. ತಮ್ಮನಿಗೆ ಮಾಡಿಕೊಟ್ಟಂತೆ ಹಿರಿಯ ಮಗನಿಗೂ ಬೇರೊಂದು ಅಂಗಡಿಯನ್ನು ತೆರೆದುಕೊಟ್ಟರು. ಎರಡನೆಯ ಮಗ ರಾಘವೇಂದ್ರನನ್ನು ತಮ್ಮ ಜೊತೆಯಲ್ಲಿ ಇರಿಸಿಕೊಂಡರು.

ವ್ಯವಹಾರದ ಜೊತೆಗೇನೆ ಅವರ ಪರಸಹಾಯ ತತ್ಪರತೆ ಮತ್ತು ಔದಾರ್ಯಗಳೂ ವೃದ್ಧಿಗೊಂಡಿದ್ದುವು. ಅವು ಕನ್ನಡದ ಎಲ್ಲ ಬಗೆಯ ಚಟುವಟಿಕೆಗಳನ್ನು ವ್ಯಾಪಿಸಿದ್ದುವು. ಇಷ್ಟರವರೆಗೆ ಅವರು ಕನ್ನಡಕ್ಕಾಗಿ ಓರ್ವ ನಿಷ್ಠಾವಂತ ಕಾರ್ಯಕರ್ತನೆಂಬಂತೆ ದುಡಿದಿದ್ದರು. ಈಗ ಹಿರಿಯರಾಗಿದ್ದುಕೊಂಡು ಮಾರ್ಗದರ್ಶನವನ್ನೂ ಧಾರಾಳವಾದ ಆರ್ಥಿಕ ಸಹಾಯವನ್ನೂ ಮಾಡುತ್ತ ಕನ್ನಡ ಕಾರ್ಯವನ್ನು ಮುಂದುವರಿಸಿದರು.

ಅವರು ಓನಾಮದಿಂದ ಆರಂಭಿಸಿದ ನೃಪತುಂಗ ಶಾಲೆಯು ಈಗ ಹೈಸ್ಕೂಲ್ ಆಗಿ ಮಾರ್ಪಟ್ಟಿತ್ತು. ಆಗ ಹೆಡ್‌ಮಾಸ್ತರರಾಗಿದ್ದ ವಂಕಟರಾವ ನಾಯಿಕರು ಸಂಸ್ಥಾನದ ಶಿಕ್ಷಣಖಾತೆಯನ್ನು ಸೇರಿ, ಎಜ್ಯುಕೇಶನಲ್ ಇನಸ್ಪೆಕ್ಟರರಾದುದರಿಂದ ಸ್ವಾಮಿರಾವ ನಾಯಿಕ* ಎಂಬವರು ಅವರ ಸ್ಥಳದಲ್ಲಿ ಬಂದರು. ಬಾಡಿಗೆಯ ಎರಡನೆಯ ಕಟ್ಟಡವೂ ಸಾಲದಾದ್ದರಿಂದ, ಆಟ-ಪಾಟಗಳಿಗೆ ಅನುಕೂಲವಾಗುವಂತೆ ಬಯಲು ಜಾಗವಿರುವ ಬೇರೊಂದು ನಿವೇಶನಕ್ಕೆ ಶಾಲೆಯು ಸ್ಥಳಾಂತರವಾಯಿತು. ವಿದ್ಯಾರ್ಥಿಗಳ ಸಂಖ್ಯಾಮಾನದಿಂದ ಶಾಲೆಯು ಪ್ರಗತಿಪರವಾಗಿ ಕಂಡರೂ ಆರ್ಥಿಕ ಮುಗ್ಗಟ್ಟು ತಲೆದೋರಿತು. ಸಮಿತಿಯ

---

*ಇವರು ಸಾಹಿತಿಗಳೂ ಹೌದು. 'ಮುತ್ತುಗಾರ' ಎಂಬ ಕವನ ಸಂಗ್ರಹವನ್ನೂ ಗಾದೆ ಮಾತುಗಳ ಸಂಕಲನವನ್ನೂ ಪ್ರಕಟಿಸಿದ್ದಾರೆ.

ಅಧ್ಯಕ್ಷರಾದ ಜನಾರ್ದನ ದೇಸಾಯಿಯವರು ಕಾಂಗ್ರೆಸ್ಸಿನ ಕಾರ್ಯಕ್ಕೆ ತಮ್ಮ ವೇಳೆಯನ್ನು ಮೀಸಲಿರಿಸಬೇಕಾದ್ದರಿಂದ (ಆಗ ಇದೂ ಅವಶ್ಯವಿದ್ದಿತು.). ಗುಡಗುಂಟಿ ರಾಮಾಚಾರ ಎಂಬವರಿಗೆ ಶಾಲೆಯ ಆಡಳಿತವನ್ನು ಒಪ್ಪಿಸಲಾಯಿತು.

ರಾಮಾಚಾರ್ಯರೂ ಕಾಂಗ್ರೆಸ ಕಾರ್ಯಕರ್ತರೇ. ರಾಜಕೀಯ ಪ್ರಚಾರಿತನಕ್ಕೆ ಹೇಳಿ ಮಾಡಿಸಿದಂತಿದ್ದ ಅವರಿಗೆ ಒಂದು ನೆಲೆ ಬೇಕಾಗಿತ್ತು. ನೃಪತುಂಗ ವಿದ್ಯಾಲಯವು ಅದನ್ನು ಒದಗಿಸಿತು. ಶಾಲೆಯ ಆಡಳಿತದ ಕಡೆಗೆ ಗಮನ ಕೊಡಲಿಲ್ಲವಾದ್ದರಿಂದಲೋ ಏನೊ, ಆರ್ಥಿಕ ಮುಗ್ಗಟ್ಟು ಹೆಚ್ಚಾಯಿತು. ಪಗಾರೂ ಇಲ್ಲದ ಶಿಕ್ಷಕರು ಚಿಮ್ಮಲಗಿಯವರ ಕಡೆಗೆ ಬಂದು ತಮ್ಮ ಸಂಕಷ್ಟವನ್ನು ತೋಡಿಕೊಂಡರು. ಆಡಳಿತವನ್ನು ಅವರೇ ವಹಿಸಬೇಕೆಂದು ಕೇಳಿಕೊಂಡರು. ಚಿಮ್ಮಲಗಿಯವರಿಗಾದ ನೋವು ಅಷ್ಟಿಷ್ಟಲ್ಲ. ಪುನಃ ಶಾಲೆಯ ಆಗುಹೋಗುಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಒಂದು ನೆಲೆಗೆ ತಂದರು. ಜೋಶಿ ಕೃಷ್ಣಾಚಾರ್ಯರು ಹೆಣ್ಣುಮಕ್ಕಳಿಗಾಗಿ ಶಾರದಾ ಗರ್ಲ್ಸ್ ಸ್ಕೂಲ್ ಸ್ಥಾಪಿಸಿದ್ದರಲ್ಲದೆ, ಇವೆರಡನ್ನೂ 'ಕರ್ನಾಟಕ ಶಿಕ್ಷಣ ಸಮಿತಿ' ಎಂಬ ಒಂದೇ ಸಂಸ್ಥೆಯ ಆಡಳಿತಕ್ಕೆ ಒಳಪಡಿಸಲಾಯಿತು. ೧೯೪೭-೪೮ ರ ಸುಮಾರಿಗೆ ಶಾಲೆಯ ಬೊಕ್ಕಸದಲ್ಲಿ ಇಪ್ಪತ್ತು ಸಾವಿರದಷ್ಟು ಶಿಲ್ಕು ಇದ್ದಾಗ ಚಿಮ್ಮಲಗಿಯವರು ಸಮಿತಿಯ ಅಧ್ಯಕ್ಷಪದವಿಯನ್ನು ಬಿಟ್ಟುಕೊಟ್ಟು. ಮೆಂಬರರಾಗಿ ಉಳಿದರು. ಗುಡಗಂಟಿ ರಾಮಾಚಾರ್ಯರು ಮತ್ತೆ ಅಧ್ಯಕ್ಷರಾದರು.

ಆಗೊಂದು ಘಟನೆ ನಡೆಯಿತು. ಸಮಿತಿಯ ಸಭೆಯಲ್ಲಿ ಬೇರೊಂದು ಸಂಸ್ಥೆಗೆ ೨ ಸಾವಿರ ರೂ. ಕೊಡುವ ಸೂಚನೆ ಬಂದಿತು. ಚಿಮ್ಮಲಗಿಯವರು "ಶಾಲೆಯ ದುಡ್ಡನ್ನು ಬೇರೆ ಕಾರ್ಯಕ್ಕಾಗಿ ಬಳಸುವುದು ಸರಿಯಲ್ಲ" ಎಂದು ವಾದಿಸಿದರು. ಅದಕ್ಕೆ ರಾಮಾಚಾರ್ಯರ ಉತ್ತರ : "ಅದಾದರೂ ಸಾರ್ವಜನಿಕ ಸಂಸ್ಥೆಯೇ., ಕನ್ನಡಿಗರದ್ದೇ".

"ಇರಬಹುದು. ಶಾಲೆಯ ದುಡ್ಡು ಶಾಲಾಕಾರ್ಯಕ್ಕೇನೆ ವಿನಿಯೋಗವಾಗಬೇಕಲ್ಲವೆ. ಈಗ ನೀವು ಕೊಡಬೇಕೆಂದಿರುವ ಸಂಸ್ಥೆಗೆ, ಬೇಕಾದರೆ ಪ್ರತ್ಯೇಕ

ಹಣ ಕೂಡಿಸಿರಿ. ನಾನೂ ಸಹಾಯ ಮಾಡುವೆ ನನ್ನದು ತಾತ್ವಿಕ ವಿರೋಧ ಮಾತ್ರ".

"ಹಣ ಕೊಟ್ಟುಬಿಟ್ಟದ್ದಾಗಿದೆ. ಈಗ ಬರೇ ಮಾಹಿತಿಗಾಗಿ ಸಭೆಯ ಮುಂದಿರಿಸಿದ್ದೇನೆ, ತಿಳಿಯಿತೆ ? ನಿಮಗೆ ಅದು ಸರಿಬರದಿದ್ದರೆ ಎದ್ದು ಹೋಗ ಬಹುದು" ಎಂಬುದಾಗಿ ಗುಡಗಂಟಿಯವರು ಅಬ್ಬರಿಸಿದರು !

ಸಭೆಯಲ್ಲಿ ಹಾಜರಿದ್ದ ಒಬ್ಬರಿಗಾದರೂ ಚಿಮ್ಮಲಗಿಯವರ ವಾದದಲ್ಲಿ ತಥ್ಯವಿದೆ ಎಂದು ಹೊಳೆಯಬಾರದೆ? ಹಾಗೆ ಒಬ್ಬಿಬ್ಬರಿಗೆ ಹೊಳೆಯದಿದ್ದರೂ ರಾಮಾಚಾರ್ಯರ ದರ್ಪಕ್ಕೆ ಮಣಿದು ಸುಮ್ಮನಿದ್ದಿರಬೇಕು. ಅಧ್ಯಕ್ಷರ high-handed ನಡತೆಯ ಜೊತೆಗೆ, ಇತರ ಸದಸ್ಯರ ನಿರ್ವೀರ್ಯತೆಯೂ ಚಿಮ್ಮಲಗಿಯವರಿಗೆ ಬೇಸರ ತಂದಿರಬೇಕು. ಆ ದಿನ ಎದ್ದು ಹೋಗಿಬಿಟ್ಟ ರಲ್ಲದೆ, ತಾವೇ ಕಟ್ಟಿ ಬೆಳೆಸಿದ ನೃಪತುಂಗ ವಿದ್ಯಾಲಯದಿಂದ ಕಾಯಂ ಆಗಿ ಹೊರಬಂದರು.

ಚಿಮ್ಮಲಗಿಯವರು 'ಸ್ವಂತದ ಉದ್ಯೋಗವನ್ನು ತಮ್ಮ ಬೆಳೆದ ಮಕ್ಕಳ ಕೈಗೆ ಒಪ್ಪಿಸಿ, ಶಾಲೆಯ ಅಭಿವೃದ್ಧಿಗಾಗಿ ಸಂಸ್ಥಾನದಲ್ಲಿ ಮತ್ತು ಒಳನಾಡಿನಲ್ಲಿ, ಸುತ್ತಾಡಿ ದೊಡ್ಡ ನಿಧಿಯನ್ನು ಕೂಡ್ರಿಸಬೇಕು : ಗ್ರಂಥಾಲಯವನ್ನು ಸ್ಥಾಪಿಸ ಬೇಕು'—ಎಂದೆಲ್ಲ ಯೋಚಿಸಿದ್ದರು. ನಿಜಾಮರ ರಾಜ್ಯವಳಿದುದರಿಂದ, ಅದಕ್ಕೆ ಅನುಕೂಲವಾದ ಪರಿಸ್ಥಿತಿಯೂ ಒದಗಿಬಂದಿದ್ದಿತು. ಆದರೆ ರಾಜಕಾರಣಿ ಗಳ ಕ್ಷುಲ್ಲಕ ಮನೋವೃತ್ತಿಯಿಂದಾಗಿ ಅವರ ಇಚ್ಛೆ ಕೈಗೂಡದೇ ಹೋಯಿತು. 'ಹಾಂ, ನಾನು ಸ್ಥಾಪಿಸಿ ಬೆಳೆಸಿದ ಸಂಸ್ಥೆ, ನನಗೆ ಅಡ್ಡಬರುವವರನ್ನೆಲ್ಲ ಒಂದು ಕೈ ನೋಡಿಬಿಡುವೆ' ಎಂಬ ಮನೋಭಾವವನ್ನು ಅವರು ತಾಳಿದ್ದಿದ್ದರೆ ಅದು ಸಹಜವೇ ಅನಿಸಬಹುದಿತ್ತು. ಚಿಮ್ಮಲಗಿಯವರ ಮನೋವೃತ್ತಿ ಹಾಗಿದ್ದಿಲ್ಲ ವಲ್ಲ, 'ಪರಮಾತ್ಮನ ಮನಸ್ಸಿಗೆ ಬರಲಿಲ್ಲ' ಎಂದುಕೊಂಡು ಶಾಲಾಕಾರ್ಯಕ್ಕೆ ವಿದಾಯ ಹೇಳಿದರು.

ಆಗಿದ್ದ ಶಾಲೆಯಲ್ಲಿ ಶೇಕಡ ೩೩% ಕನ್ನಡ ಹುಡುಗರಿದ್ದು ಉಳಿದವರು ಬೇರೆ ಭಾಷೆಯವರಾಗಿದ್ದ ಅಂಶವೂ ಚಿಮ್ಮಲಗಿಯವರ ಬೇಸರಕ್ಕೆ ಕಾರಣ

ವಾಗಿದ್ದಿತು. ಇಂಗ್ಲಿಶ್ ಮಾಧ್ಯಮವಾದ್ದರಿಂದ ಇದ್ದು ಸಾಧ್ಯವಾಗಿ, ಕನ್ನಡವು ಕಲಿಯಬೇಕಾದ ಒಂದು ವಿಷಯವಾಗಿದ್ದಿತು. ಹೈದರಾಬಾದ ನಗರದಲ್ಲಿ ಅನೇಕ ಕನ್ನಡಿಗರಿದ್ದರೂ, ತಮ್ಮ ಮಕ್ಕಳನ್ನು, ಕನ್ನಡ ಕಲಿಯುವ ಅವಕಾಶ ವಿರುವ, ಕನ್ನಡಿಗರದೇ ಆದ ಈ ಶಾಲೆಗೆ ಕಳಿಸಲು ಇನ್ನೂ ಮನಸ್ಸು ಮಾಡು ತ್ತಿಲ್ಲವೆಂಬುದೂ ಅವರಿಗೆ ಬೇಸರ ತರಿಸಿತ್ತು.*

ಶಾಲೆಯಾ ಆಡಳಿತದಿಂದ ದೂರವಿದ್ದರೂ ಅದರ ಹಿತಚಿಂತನೆ ಅವರ ಮನದಲ್ಲಿ ಸದಾಕಾಲವೂ ಇದ್ದಿತು. ಕ್ರಿ. ಶ. ೧೯೪೮ರಲ್ಲಿ ಸಂಸ್ಥಾನದ ವಿಮೋ ಚನೆಯಾದ ಅನಂತರ, ಕಾಂಗ್ರೆಸ್ ಆಡಳಿತ ಬಂದಿತಷ್ಟೆ. ಈ ರಾಜಕೀಯ ಹೋರಾಟದಲ್ಲಿ ಕನ್ನಡಿಗರ ಪಾತ್ರ ಕಡಿಮೆಯದೇನಲ್ಲ. ಕನ್ನಡ ಕಾರ್ಯಕ್ಕಾಗಿ ಅವರು ಸರಕಾರದ ಸಹಾಯವನ್ನು ಪಡೆಯುವುದು ಸುಲಭಸಾಧ್ಯವಿತ್ತು. ಅದಾಗಲೇ ಮಹಾರಾಷ್ಟ್ರದ ಕೆಲ ಧುರೀಣರು ಪುಣೆ, ಮುಂಬಯಿಗಳಿಂದ ಬಂದು, ಹೈದರಾಬಾದದ ಪ್ರಜೆಗಳನ್ನು ಹುರಿದುಂಬಿಸಿ, ಹಲವು ಸೌಲಭ್ಯ ಗಳನ್ನು ಪಡೆದಿದ್ದರು. ಕನ್ನಡಿಗರು ಹಾಗೆ ಯೋಚಿಸಲಿಲ್ಲವೆಂದು ಚಿಮ್ಮಲಗಿ ಯವರು ಹಳಹಳಿಸಿದ್ದುಂಟು. ಉದಾಹರಣೆಗೆ, ನೃಪತುಂಗ ವಿದ್ಯಾಲಯಕ್ಕೆ ಬೇಕಾಗಿದ್ದ ಸ್ವಂತದ ಕಟ್ಟಡ. ಕಟ್ಟಡದ ನಿವೇಶನವನ್ನು, ಕ. ಶಿ. ಸಮಿತಿ ಯವರು ೫೦ ಸಾವಿರ ರೂ. ಕೊಟ್ಟು ಕೊಂಡಿದ್ದರು. ಹಾಗೆ ಮಾಡದೇ, ಸರಕಾರದ ಕಡೆಯಿಂದ ಯಾವದಾದರೂ ಜಾಗ ಅಥವಾ ಕಟ್ಟಡವನ್ನು ನಾವು ಮಾತ್ರ ಬೆಲೆಗೆ ಕೊಳ್ಳಬಹುದಿತ್ತಲ್ಲವೆ? ನಮ್ಮವರೇ ಆದ ಮಂತ್ರಿಗಳು ಆಗಿನ ಮಂತ್ರಿಮಂಡಲದಲ್ಲಿ ಇದ್ದೂ ಈ ದೃಷ್ಟಿಯಿಂದ ಯೋಚಿಸದೇ ಹೋದರಲ್ಲ ಎಂಬುದಾಗಿ ಚಿಮ್ಮಲಗಿಯವರು ಬೇಸರಪಟ್ಟರು.

"ಏನೇ ಆಗಲಿ, ವಿದ್ಯಾಲಯಕ್ಕೆ ಸ್ವಂತ ಕಟ್ಟಡವಾಗಿದೆ. ಈ ದೊಡ್ಡ ಕಟ್ಟಡದಲ್ಲಿ ೬೦೦ ವಿದ್ಯಾರ್ಥಿಗಳ ಅಭ್ಯಾಸ ಚೆನ್ನಾಗಿ ಆಗುತ್ತಿದೆ. ಕನ್ನಡಿಗರ ಸಂಖ್ಯೆ ಅಂತೂ ಹೆಚ್ಚುತ್ತಲಿದೆ. ಇದನ್ನು ನೋಡಿ ಆನಂದವೇ ಆನಂದ" ಎಂಬ

*ಇಂಥ ಸ್ಥಿತಿಯು ಮುಂಬಯಿಯಂಥ ನಗರದಲ್ಲಿ ಈಗಲೂ ಇದ್ದುದೇ.

ಅಭಿಪ್ರಾಯವನ್ನು ಚಿಮ್ಮಲಗಿಯವರು ತಮ್ಮ ಆತ್ಮಚರಿತ್ರೆಯ ಟಿಪ್ಪಣಿಯಲ್ಲಿ ಬರೆದಿದ್ದಾರೆ.

ಚಿಮ್ಮಲಗಿಯವರು ಸಾಹಿತಿಗಳೇನೂ ಅಲ್ಲ. ಆದರೆ ಆ ಕಾಲದಲ್ಲಿ ಅವರು ಸಾಹಿತ್ಯರಂಗದಲ್ಲಿ ಸಂಬಂಧಿಸಿದವರಿಗೆ ಅಖಂಡವಾಗಿ ನೆರವಾದರು. ನಿಜಾಮ ಸಂಸ್ಥಾನದ ಕನ್ನಡ ಗ್ರಂಥೋದ್ಯಮವನ್ನು ಅವರು ಪೋಷಿಸಿದ ರೀತಿ ಬೇರೆಯೇ ಆಗಿದ್ದಿತು. ಅದರಲ್ಲಿ ವ್ಯಾವಹಾರಿಕವಾದ, ಆದರೆ ನಿಸ್ವಾರ್ಥ ದೃಷ್ಟಿ ಬೇರೆ ಬೆರೆತಿದ್ದಿತು. ಹೈದರಾಬಾದಿನ ಕರ್ನಾಟಕ ಸಾಹಿತ್ಯ ಮಂದಿರ, ಕೊಪ್ಪಳದ ಸಾಹಿತ್ಯ ಸೇವಾ ಸಂಘ, ನಿಜಾಂ ಕರ್ನಾಟಕ ವಿದ್ಯಾರ್ಥಿ ಸೇವಾ ಸಂಘ ಮೊದಲಾದ ಸಂಸ್ಥೆಗಳವರು ಹಲವಾರು ಪುಸ್ತಕಗಳನ್ನು ಪ್ರಕಟಿಸಿದರಷ್ಟೆ. ಚಿಮ್ಮಲಗಿಯವರು ಒಂದೊಂದು ಪ್ರಕಟನೆಗೆ ೪೦೦ ರಿಂದ ೧,೦೦೦ ರೂ.ಗಳವರೆಗೆ ಹಣ ಕೊಟ್ಟು ಅಷ್ಟು ಬೆಲೆಯ ಪ್ರತಿಗಳನ್ನು ಪಡೆಯುತ್ತಿದ್ದರು. ಅದನ್ನು ನಿಜಾಮ ರಾಜ್ಯ, ಅದರಂತೆ ಕರ್ನಾಟಕದ ಇತರ ಜಿಲ್ಲೆಗಳಲ್ಲಿಯೂ ಪುಕ್ಕಟೆಯಾಗಿ ವಿತರಣೆ ಮಾಡುತ್ತಿದ್ದರು. ಅಷ್ಟೇ ಹಣವನ್ನು ಅವರು ಮುದ್ರಣ ವೆಚ್ಚ, ಇಲ್ಲವೆ ಕಾಗದ ಖರೀದಿಗಾಗಿ ದೇಣಿಗೆ ಕೊಟ್ಟು ಕಳುಹಿಸಬಹುದಿತ್ತು. (ಹಾಗೆ ಧನ ಸಹಾಯ ಮಾಡುವವರು ಈಗಲೂ ಇದ್ದಾರೆ), ಆದರೆ ಅದರಿಂದ ಪುಸ್ತಕ ಗಳು ಪ್ರಸಾರವಾಗದೇ ಆ ಆ ಪ್ರಕಾಶನ ಸಂಸ್ಥೆಗಳಲ್ಲಿ ಧೂಳು ತಿನ್ನುತ್ತ ಕೂಡ್ರುತ್ತಿದ್ದುವು! ಮಾಸ್ತಿ ನರಸಿಂಗರಾಯರ 'ಕನ್ನಡ ಯಾತ್ರೆ', ಸಿದ್ಧಯ್ಯ ಪುರಾಣಿಕರು ಹೈದರಾಬಾದಿನಲ್ಲಿದ್ದಾಗ ಬರೆದ ಕೃತಿಗಳು, ಗೋಕಾಕರ 'ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು' ಇವೇ ಮೊದಲಾದ ಪುಸ್ತಕಗಳ ಪ್ರಸಾರ ಮೇಲೆ ವಿವರಿಸಿದ ರೀತಿಯಲ್ಲಿ ನಡೆಯಿತು.*

ಕ್ರಿ.ಶ. ೧೯೪೧ರಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವು ಹೈದರಾ

*ಗೋಕಾಕರ ಗ್ರಂಥವನ್ನು ಪ್ರಕಟಿಸಿದ ಪದ್ಮ ಪ್ರಕಟನಾಲಯದವರು ಚಿಮ್ಮಲಗಿಯವರ ಬಗ್ಗೆ ಪ್ರಸ್ತಾವನೆಯಲ್ಲಿ ಬರೆದದ್ದನ್ನು ಇಲ್ಲಿ ಪ್ರಾಸಂಗಿಕವಾಗಿ ಉಲ್ಲೇಖಿಸಬಹುದು : "ಇನ್ನೊಂದು ಸಂತೋಷದ ಸುದ್ದಿ. ಹೈದರಾಬಾದಿನ ಕನ್ನಡದ ಮುಂದಾಳುಗಳೂ ಕನ್ನಡದ ಅಭಿವೃದ್ಧಿಗೆ ಪ್ರೋತ್ಸಾಹಿಸುತ್ತ ಕಿರಿಯರಿಗೆ ಮಾರ್ಗದರ್ಶಕರಾಗಿರುವ ಶ್ರೀ ಚಿಮ್ಮಲಗಿಯವರು ನಮ್ಮ ಪ್ರಕಟನಾಲಯದ ಮಹಾಪೋಷಕರಾಗಿರುವರು".

ಬಾದಿನಲ್ಲಿ ಜರುಗಿತು. ಎ.ಆರ್. ಕೃಷ್ಣಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ. ಅದರ ಸ್ವಾಗತ ಸಮಿತಿ ರಚನೆಯಾದಾಗ, ಸ್ವಾಗತಾಧ್ಯಕ್ಷರು ಯಾರಾಗಬೇಕೆಂಬ ಚರ್ಚೆ ಸಮಿತಿಯ ಸಭೆಯಲ್ಲಿ ನಡೆಯಿತು. ಚಿಮ್ಮಲಗಿಯವರ ಹೆಸರನ್ನು ಒಬ್ಬ ಸದಸ್ಯರು ಸೂಚಿಸಿದರು. "ಛೆ-ಅವರು ವ್ಯಾಪಾರಿಗಳು ನಮಗೆ ವಿದ್ಯಾವಂತ ಮುಂದಾಳುಗಳು ಬೇಕು" ಎಂಬ ಅರ್ಥ ಹೊರಡುವ ರೀತಿಯಲ್ಲಿ ಇನ್ನೊಬ್ಬ ಸದಸ್ಯರು ಪರ್ಯಾಯವಾಗಿ ನುಡಿದರು. ಮೊದಲು ಸೂಚಿಸಿದವರು ಪ್ರತ್ಯುತ್ತರ ಕೊಟ್ಟಿದ್ದರೆ ಅಥವಾ ಬಹುಮತ ತಗೊಂಡಿದ್ದರೆ ಚಿಮ್ಮಲಗಿಯವರು ನಿಶ್ಚಿತ ವಾಗಿ ಸ್ವಾಗತಾಧ್ಯಕ್ಷರಾಗುತ್ತಿದ್ದರು, ಆದರೆ ಅವರೇ ಬೇಸರಪಟ್ಟುಕೊಂಡು ತಮ್ಮ ಹೆಸರನ್ನು ಹಿಂತೆಗೆದುಕೊಂಡುಬಿಟ್ಟರು. ಗುಡಗಂಟಿ ರಾಮಾಚಾರ್ಯರು ಸ್ವಾಗತಾಧ್ಯಕ್ಷರಾದರು. ಚಿಮ್ಮಲಗಿಯವರು ತಮ್ಮ ಟಿಪ್ಪಣಿಗಳಲ್ಲಿ ಸಮ್ಮೇಳನವು ಯಶಸ್ವಿಯಾಗಿ ಜರುಗಿತೆಂದೂ ಅದರಿಂದ ತಮಗೆ ಸಂತೋಷವಾಗಿದೆಯೆಂದೂ, ಪ್ರಾಂಜಲ ಮನಸ್ಸಿನಿಂದ ಬರೆದಿದ್ದಾರೆ.

ಆದರೆ ಇಷ್ಟಕ್ಕೆ ಚಿಮ್ಮಲಗಿಯವರ ಸ್ಥಾನಮಾನವನ್ನು ಸಮ್ಮೇಳನದವರು ಮರೆಯಲು ಸಾಧ್ಯವೆ? 'ಹೈದರಾಬಾದ ಕರ್ನಾಟಕ' ಎಂಬ ಹೆಸರಿನ, ಸಮ್ಮೇಳನದ ಉತ್ಸವ ಪತ್ರಿಕೆಯನ್ನು ಚಿಮ್ಮಲಗಿಯವರಿಗೇ ಅರ್ಪಿಸಿದ್ದಾರೆ. ಅದರ ಒಕ್ಕಣೆ ಇಂತಿದೆ :

"ಬತ್ತಿ ಹೋಗುತ್ತಿದ್ದ ಕನ್ನಡದ ಸಿಲೆಯನ್ನು ಪುನರುಜ್ಜೀವನಗೊಳಿಸು ವದಕ್ಕಾಗಿ ಅಭಿಮಾನದ ಕೆಚ್ಚನ್ನೂ ಆಶ್ರಯವನ್ನೂ ನೀಡಿ, ರಾಜಧಾನಿಯಾದ ಹೈದರಾಬಾದು ನಗರದಲ್ಲಿ ಕನ್ನಡದ ಮುನ್ನಡೆಗೆ ಪ್ರಯತ್ನಿಸುತ್ತಿರುವ **ಕನ್ನಡ ಭಕ್ತ ಶ್ರೀ ಭೀಮಾಚಾರ್ಯ ಗೋವಿಂದಾಚಾರ್ಯ ಚಿಮ್ಮಲಗಿ ಅವರಿಗೆ"**

ಕನ್ನಡ ವ್ಯವಸಾಯೀ ನಾಟಕ ಕಂಪನಿಗಳು ಹೈದರಾಬಾದಿಗೆ ಬಂದು ವೆಂದರೆ ಟಿಕೀಟು ಖರ್ಚಾಗುವವೆಂಬ ಖಾತ್ರಿ ಇದ್ದಿತೆಲ್ಲಿ? ಅವರು ಬಂದು ನಿರಾಶರಾಗಿ ಹೋಗಬಾರದೆಂದು, ದೊಡ್ಡ ಸಂಖ್ಯೆಯಲ್ಲಿ ಟಿಕೀಟು ಕೊಂಡು ಚಿಮ್ಮಲಗಿಯವರು ಅವರಿವರಿಗೆ ಹಂಚುತ್ತಿದ್ದರು. ಗುಬ್ಬಿ ಕಂಪನಿ, ಗರುಡ ಸದಾಶಿವರಾಯರ ಕಂಪನಿ, ಕಂದಗಲ್ಲ ಹನುಮಂತರಾಯರ ನಾಟಕ ಕಂಪನಿ

ಮೊದಲಾದವುಗಳಿಗೆ ಚಿಮ್ಮಲಗಿಯವರು, ಹೀಗೆ ಪರ್ಯಾಯವಾಗಿ ಸಹಾಯ ಮಾಡಿದ್ದಾರೆ. ಮನಸಬ್ದಾರರ ನಾಟಕಗಳಿಗೆ ಪ್ರೋತ್ಸಾಹವಿತ್ತ ಬಗೆಯನ್ನು ಈ ಮೊದಲು ಹೇಳಿದ್ದೇವೆ.

ಹೊಸತಾಗಿ ಆರಂಭವಾದ ಹಲವಾರು ವ್ಯಾಪಾರೀ ಸಂಸ್ಥೆಗಳ ಶೇರು ಗಳನ್ನು ಚಿಮ್ಮಲಗಿಯವರು ಹಿಂದು ಮುಂದೆ ಯೋಚಿಸದೆ ಕೊಳ್ಳುತ್ತಿದ್ದರು– ಅವು ಕನ್ನಡಿಗರಿಂದ ಸ್ಥಾಪಿತವಾಗಿವೆಯೆಂದು ! ಇಂಥ ಸಂಸ್ಥೆಗಳಲ್ಲಿ ಹೆಚ್ಚಿನವು ದಿವಾಳಿ ತೆಗೆದು ಅವರ ಶೇರುಗಳು ಕಳೆದು ಹೋದುವು–ಆ ಮಾತು ಬೇರೆ. ಆದರೆ ಒಮ್ಮೆ ಹಾಗೆ ಕೈಸುಟ್ಟುಕೊಂಡರೂ, ಮತ್ತೊಬ್ಬ ಕನ್ನಡಿಗರು ಬಂದು ಶೇರುಗಳನ್ನು ಕೊಡಮಾಡಿದಾಗ ಚಿಮ್ಮಲಗಿಯವರು ನಿರಾಕರಿಸುತ್ತಿದ್ದಿಲ್ಲ.

ನೃಪತುಂಗ ವಿದ್ಯಾಲಯದ ಹಾಗೂ ಸಾಹಿತ್ಯ ಮಂದಿರದ ಸದಸ್ಯರು ಹೆಚ್ಚಿನ ಮಟ್ಟಿಗೆ ಒಂದೇ ಇದ್ದರಲ್ಲವೆ. ಸಾಹಿತ್ಯ ಮಂದಿರದ ಒಂದು ಯೋಜನೆಯ ವಿಷಯದಲ್ಲಿ ಚಿಮ್ಮಲಗಿಯವರು ಬಡಿದಾಡಬೇಕಾಯಿತು. ಆ ಪ್ರಸಂಗ ಇಂತಿದೆ : ಮಂದಿರಕ್ಕಾಗಿ ಪ್ರತ್ಯೇಕ ನಿವೇಶನ ಪಡೆಯಲು, ಹತ್ತು ಸಾವಿರ ರೂ.ಗಳನ್ನು ಸಾಲವಾಗಿ ಕೊಡಬೇಕೆಂದು ಕಮಿಟಿಯವರು ಚಿಮ್ಮಲಗಿಯವರಿಗೆ ವಿನಂತಿ ಮಾಡಿಕೊಂಡರು, ಸಾರ್ವಜನಿಕ ಸಂಘಗಳಿಗೆ, ಸಾಲವೆಂದು ದಾತೃವೊಬ್ಬ ಕೊಡುವುದು ಔಚಿತ್ಯದ್ದೆನಿಸದು. ಅಲ್ಲದೆ ಹಣ ಬಾರದಿದ್ದಾಗ ಕೋರ್ಟಿನಲ್ಲಿ ದಾವೆ ಹೂಡಲು ಬಹುದೆ ? ಆದ್ದರಿಂದ ಅವರು "ಸಾಧ್ಯವಿಲ್ಲ, ಬೇಕಾದರೆ ನನ್ನಿಂದಾದಷ್ಟು ದೇಣಿಗೆಯನ್ನು ಕೊಡುವೆ" ಎಂದರು. ಆದರೆ ಸಮಿತಿಯವರು ಸಿಕಂದರಾಬಾದಿನಲ್ಲಿದ್ದ ಇವರ ತಮ್ಮ ವೇದವ್ಯಾಸರ ಬಳಿ ಹೋಗಿ, ಅವರಿಂದ ೧೦ ಸಾವಿರ ರೂ. ಪಡೆದುಬಿಟ್ಟರು. ಅದು ತಿಳಿದ ಮೇಲೆ, ಚಿಮ್ಮಲಗಿಯವರು ಈ ಸಾಲದ ವ್ಯವಹಾರ ಅದೆಷ್ಟು ಅನುಚಿತವೆಂದು ತಮ್ಮನಿಗೆ ತಿಳಿಸಿ ಹೇಳಿ, ಅದನ್ನು ದೇಣಿಗೆಯೆಂದೇ ಮಾರ್ಪಡಿಸಿದರು.



ನಿಜಾಮ ಸಂಸ್ಥಾನದಲ್ಲಿ ರಾಜಕೀಯ ಜಾಗೃತಿಯು ಸುಸ್ಪಷ್ಟವಾಗಿ ತಲೆದೋರಿದ್ದು ೧೯೩೦ನೆಯ ದಶಕಾರಂಭದಿಂದ. ಬ್ರಿಟಿಶರ ನೇರ ಆಡಳಿತದ ಪ್ರದೇಶಗಳಿಗಿಂತಲೂ ಇಲ್ಲಿಯ ಕಾಂಗ್ರೆಸಿಗರ ಮೇಲೆ ಹೆಚ್ಚಿನ ನಿರ್ಬಂಧಗಳಿದ್ದುವು, ಹೀಗಾಗಿ ಸ್ವಾತಂತ್ರ್ಯ ಚಳುವಳಿಯನ್ನು ಇಲ್ಲಿ ನಡೆಸುವುದು ಹೆಚ್ಚು ಕಷ್ಟದಾಯಕವಿದ್ದಿತು. ರಜಾಕಾರರ ಹಾವಳಿಯಲ್ಲಂತೂ (೧೯೪೬-೪೭) ಸಂಸ್ಥಾನದ ಪ್ರಜೆಗಳು ಎದುರಿಸಬೇಕಾಗಿ ಬಂದ ಪ್ರಸಂಗ ಕಷ್ಟನಷ್ಟಗಳಿಗೆ ಮಿತಿಯಿರಲಿಲ್ಲ. ಅಂತೂ ೧೯೪೮ರಲ್ಲಿ ಸಂಸ್ಥಾನವು 'ಮುಕ್ತ'ವಾಗುವವರೆಗಿನ ಸುಮಾರು ಎರಡು ದಶಕಗಳ ಸ್ವಾತಂತ್ರ್ಯಾಂದೋಲನದಲ್ಲಿ ಕನ್ನಡ ಧುರೀಣರ ಪಾತ್ರವು ಎದ್ದುಕಾಣುವಂತೆಯೇ ಇತ್ತು. ಕ್ರಿ.ಶ. ೧೯೩೭ರಲ್ಲಿ ನಿಜಾಮ ಕನ್ನಡಿಗರ ರಾಜಕೀಯ ಪರಿಷತ್ತು ಸೇರಿತು. ಆಮೇಲೆ ಇನ್ನು ಹಲವು ಸಮ್ಮೇಳನಗಳು ಆ ಹೆಸರಿನಲ್ಲಿ ನಡೆದುವು. ಆಗಿನ ರಾಜಕೀಯ ಧುರೀಣರಾಗಿ ಮೆರೆದ ಕನ್ನಡಿಗರೆಂದರೆ ಸ್ವಾಮಿ ರಮಾನಂದತೀರ್ಥ, ಕಿಶನರಾವ, ಜನಾರ್ದನ ದೇಸಾಯಿ, ರಾಮಾಚಾರ್ಯ, ಗುಡಗುಂಟಿ, ಜಿ.ಎಸ್. ಮೇಲುಕೋಟೆ, ಕೃಷ್ಣಾಚಾರ್ಯ ಜೋಶಿ, ಇತ್ಯಾದಿ. ಪಂಡಿತ ತಾರಾನಾಥ, ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಜಿ. ಕೆ. ಪ್ರಾಣೇಶಾಚಾರ್ಯ, ರಾ. ಗು. ಜೋಶಿ ಇವರು ರಾಜಕೀಯ ಹಾಗೂ ಸಾಂಸ್ಕೃತಿಕ ರಂಗ-ಎರಡರಲ್ಲಿಯೂ ಶ್ರಮಿಸಿದ್ದಾರೆ. ರಾಚೋಟಯ್ಯ ಎಂಬವರು ನಿಜಾಂ ಕನ್ನಡಿಗರಿಗಾಗಿ ರಾಷ್ಟ್ರೀಯ ದಿನಪತ್ರಿಕೆಯನ್ನು ಹೊರಡಿಸಿದ ಧೀರರು, ಶಿಕ್ಷಣ ಕ್ಷೇತ್ರದಲ್ಲಿ ದುಡಿದವರೆಂದು, ಪುನಃ ತಾರಾನಾಥ, ಪದ್ಮನಾಭ ಪುರಾಣಿಕ ಮುಂತಾದವರನ್ನು ಹೆಸರಿಸಬೇಕು. ಸಾಹಿತ್ಯ ಕ್ಷೇತ್ರದಲ್ಲಿ ಡಿ. ಕೆ. ಭೀಮಸೇನರಾವ ಹಾಗೂ ನರಸಿಂಗರಾವ ಮಾನ್ವಿ ಇವರ ಹೆಸರು ಆಗಿನ ಕಾಲಕ್ಕೆ ಎದ್ದುಕಾಣುವಂತಿತ್ತು. ಇತ್ತ ದಿವಾಕರ ರಂಗರಾವ· ಹರ್ಡೇಕರ ಮಂಜಪ್ಪ ಮುಂತಾದವರು ಹೊರಗಿನಿಂದ ಬಂದವರಾಗಿ ಹೈದರಾಬಾದ ಕನ್ನಡಿಗರ ಜಾಗೃತಿಗೆ ಸಾಕಷ್ಟು ನೆರವಾದರು.

ಹೈದರಾಬಾದಿನಲ್ಲಿ ನೆಲೆಸಿದ್ದ ಕನ್ನಡಿಗರಲ್ಲಿ ಅನೇಕರು ಪ್ರಮುಖ ವಕೀಲ

ರಾಗಿದ್ದರು. ಕಾಗಲ ಶ್ರೀನಿವಾಸರಾವ, ಗುಂಡೇರಾವ ಜೋಶಿ. ಬಿ. ಕೆ. ರಾಮಾನುಜಯ್ಯಂಗಾರ್. ಎನ್.ಎಸ್. ರಾಘವರಾವ್, ಗುಡೂರು ಶ್ರೀನಿವಾಸ ರಾವ, ರಾಮಾಚಾರ್ಯ ಜೋಶಿ, ಜಯಾಚಾರ್ಯ ಪುರಾಣಿಕ–ಈ ವ್ಯಕ್ತಿಗಳು ಕನ್ನಡೇತರರಲ್ಲಿಯೂ ಪ್ರಸಿದ್ಧರಾಗಿದ್ದರು. ವಿವಿಧ ಸರಕಾರೀ ಖಾತೆಗಳಲ್ಲಿಯೂ ಹಲವು ಕನ್ನಡಿಗರು ಉಚ್ಚಸ್ಥಾನದಲ್ಲಿದ್ದರು. ಈ ಮುಂಚೆ ಹೇಳಿದ ಡಾ. ಬದಾಮಿಯವರಲ್ಲದೆ, ಡಾ. ಎಲ್.ಜಿ. ಕುಲಕರ್ಣಿ ಎಂಬವರು, ಜರ್ಮನಿಯಲ್ಲಿ ಒಕ್ಕಲುತನದ ವಿಷಯವಾಗಿ ಪಿ.ಎಚ್.ಡಿ. ಪಡೆದು, ಆ ಖಾತೆಯಲ್ಲಿ ಹಿರಿಯ ಅಧಿಕಾರಿಗಳಾಗಿದ್ದರು.

ಚಿಮ್ಮಲಗಿಯವರು ಅಪ್ಪಟ ಕಾಂಗ್ರೆಸ್ ಅನುಯಾಯಿಗಳೇ ಆಗಿದ್ದು, ಹೈದರಾಬಾದ ಕರ್ನಾಟಕ ಕಾಂಗ್ರೆಸ್ ಸ್ಥಾಪನೆಯಾದಂದಿನಿಂದ ಅದರ ಸದಸ್ಯ ರಿದ್ದರು. ಅದರ ಸಭೆಗಳಲ್ಲಿ ಹಾಜರಿರುತ್ತಿದ್ದರು. ಆದರೆ ಸ್ವಾತಂತ್ರ್ಯದ ಹೋರಾಟದಲ್ಲಿ ನೇರವಾಗಿ ಧುಮುಕದೇ, ಹಿನ್ನೆಲೆಯ ಸಹಾಯ ಸಲ್ಲಿಸಿದರು. ಕನ್ನಡಿಗರಾದ ರಾಜಕೀಯ ಧುರೀಣರೆಲ್ಲರೊಡನೆ ಚಿಮ್ಮಲಗಿಯವರ ನಿಕಟ ಸಂಪರ್ಕವಿದ್ದಿತು. ಅಲ್ಲದೆ, ವಕೀಲ ಮುಂತಾದ ಪ್ರತಿಷ್ಠಿತ ವಲಯದಲ್ಲಿಯೂ ಇವರಿಗೆ ಮನ್ನಣೆಯಿದ್ದಿತು. ಮೇಲೆ ಹೆಸರಿಸಿದ ಯಾರೊಬ್ಬ ಕನ್ನಡಿಗರಿಗಿಂತ ಮುಂಚೆಯೇ, ಆ ನಗರದ ಕನ್ನಡ ಚಟುವಟಿಕೆಗಳಲ್ಲಿ ಅವರು ನಿರತರಾಗಿದ್ದ ರೆಂಬುದನ್ನು ನೆನೆದಿರಬೇಕು.

ಇತ್ತ ಕರ್ನಾಟಕದ ಒಳಪ್ರದೇಶದಿಂದ ಹೈದರಾಬಾದಿಗೆ ಹೋದ ಪ್ರಮುಖ ಕನ್ನಡಿಗರು ಯಾರೇ ಇರಲಿ, ಅವರಿಗೆ ಚಿಮ್ಮಲಗಿಯವರು ಆದರಾ ತಿಥ್ಯ ಮಾಡಿ, ಅವರ ಕಾರ್ಯವನ್ನು ನೆರವೇರಿಸಿಕೊಡುವುದು ಸರ್ವಸಾಮಾನ್ಯ ವಾಗಿದ್ದಿತು. ಕಾರ್ಯಕ್ರಮಗಳಿಗೆಂದು ಆಮಂತ್ರಿತರಾದ ಅನೇಕ ಕನ್ನಡಿಗರು, ಅದರಂತೆ ಸ್ವಂತದ ಕಾರ್ಯಾರ್ಥಿಯಾಗಿ ಹೋದವರು ಚಿಮ್ಮಲಗಿಯವರಲ್ಲಿಯೇ ಇಳಿದುಕೊಳ್ಳುತ್ತಿದ್ದರು. ದಿ. ಆಲೂರ ವೆಂಕಟರಾಯರು, ಶ್ರೀರಂಗರು, ಮಾಸ್ತಿಯವರು, ದಿವಾಕರರು ಹಾಗೆ ಚಿಮ್ಮಲಗಿಯವರ ಆತಿಥ್ಯವನ್ನು ಪಡೆದ ದ್ದುಂಟು.

ಶಿವರಾಮ ಕಾರಂತರು ಒಮ್ಮೆ ಹೈದರಾಬಾದಿಗೆ ಹೋದಾಗ ಒಂದು ಅನರ್ಥವೆ ಜರುಗಿತು. ಕಾರಂತರ ಭಾಷಣ ಕಾರ್ಯಕ್ರಮ ಮುಗಿದ ಮೇಲೆ. ಅವರಿಗೆ ಮತ್ತು ನಗರದ ಪ್ರಮುಖ ಕನ್ನಡಿಗರಿಗೆ, ಅದರಂತೆ ಕಾರ್ಯಕರ್ತರಿಗೆ ರಾತ್ರಿಯ ಭೋಜನ ಸಮಾರಂಭವನ್ನು ಚಿಮ್ಮಲಗಿಯವರು ಹಮ್ಮಿಕೊಂಡಿದ್ದರು. ಹೊರಗಡೆ ಈ ಸುಮಾರು ಐವತ್ತು ಜನರು ಹರಟೆಯಲ್ಲಿ ಹಾಗೂ ಕಾರಂತರ ವ್ಯಂಗಾತ್ಮಕ ಸಂಭಾಷಣೆ ಕೇಳುವಲ್ಲಿ ನಿರತರಾಗಿದ್ದರೆ, ಒಳಗಡೆ ಚಿಮ್ಮಲಗಿಯವರ ಮನೆ ಜನರೆಲ್ಲ ಪಕ್ವಾನ್ನದ ಅಡಿಗೆಯ ತಯಾರಿಯಲ್ಲಿದ್ದರು. ಅವರ ಹಿರಿಯ ಮಗಳು ಕುದಿಯುತ್ತಿದ್ದ ಹುಳಿಪಲ್ಯದ ಕೊಳಗದಲ್ಲಿ ಸಪಟಿನಿಂದ ಕೈಯಾಡಿಸುತ್ತಿದ್ದಾಗ, ಗೇಣುದ್ದದ ದೊಣ್ಣೇಕಾಟವು ಅದರಲ್ಲಿ ಬಿದ್ದು ಬೆಂದುಹೋದದ್ದು ಕಾಣಿಸಿತು! ಅದು ಹಸಿರು ಬಣ್ಣದ ಕೀಟವಾದ್ದರಿಂದ ಆ ಮೊದಲು ಇತರರ ಕಣ್ಣಿಗೆ ಬಿದ್ದಿರಲಿಲ್ಲ. ಕೂಡಲೇ ಬೇರೊಂದು ಹುಳಿಯನ್ನು ಮಾಡಲು ತೊಡಗಿದರು. ಆಗಲೆ ೧೦ ಗಂಟೆಯಾಗಿತ್ತು. ಇದರಿಂದಾಗಿ ಇನ್ನೊಂದು ಗಂಟೆ ಸಮಯ ಬೇಕಾಯಿತು. ಹಸಿವು, ದಣಿಕೆ ಎರಡರಿಂದಲೂ ಅತಿಥಿಗಳು ಸಿಡಿಮಿಡಿಗೊಂಡಿದ್ದರು, ಊಟ ಮುಗಿಯುತ್ತ ಬಂದಾಗ ಚಿಮ್ಮಲಗಿಯವರು, ತಡವಾದದ್ದರ ಕಾರಣವನ್ನು ವಿವರಿಸಿ ಕ್ಷಮೆ ಕೇಳಿದರು. ದೊಣ್ಣೇಕಾಟವು ಭಾರೀ ವಿಷದ ಪ್ರಾಣಿ. ಒಂದು ವೇಳೆ, ಅವರ ಮಗಳು ಅದನ್ನು ಗಮನಿಸದೇ ಹೋಗಿದ್ದರೆ, ಅದೆಂಥ ಅನರ್ಥವಾಗುತ್ತಿತ್ತೋ! 'ಅದನ್ನು ನೆನೆದರೆ ಈಗಲೂ ಭಯವೆನಿಸುತ್ತದೆ. ಅನೇಕ ಜನ ಗಣ್ಯರ ದುರ್ಮರಣದ, ಘೋರ ಪಾತಕಕ್ಕೆ ಗುರಿಯಾಗುತ್ತಿದ್ದೆನಲ್ಲ, ಪರಮೇಶ್ವರನೇ ನನ್ನನ್ನು ಕಾಪಾಡಿದ' ಎಂದು ಮುಂತಾಗಿ, ತಮ್ಮ ಟಿಪ್ಪಣಿಗಳಲ್ಲಿ ಎರಡು-ಮೂರು ಬಾರಿ ಬರೆದಿದ್ದಾರೆ.

ಚಿಮ್ಮಲಗಿಯವರು ಅನೇಕಾನೇಕ ಜನರಿಗೆ ಆಶ್ರಯದಾತರಾಗಿದ್ದರು. ಶಿಕ್ಷಣಕ್ಕಾಗಿಯೊ, ಉದ್ಯೋಗಕ್ಕಾಗಿಯೊ ಜನರು ಯಾರಾದರೂ ಗುರುತಿನವರ ಪತ್ರ ಹಿಡಿದುಕೊಂಡು ಬರುತ್ತಿದ್ದರು. ಅವರಿಗೆಲ್ಲ ಚಿಮ್ಮಲಗಿಯವರು ಸಕ್ರಿಯವಾಗಿ ನೆರವಾಗಿದ್ದಾರೆ. ಅವರು ನೆಲೆಗೊಳ್ಳುವವರೆಗೆ ತಮ್ಮಲ್ಲಿಯೆ ನಿಲ್ಲಿಸಿಕೊಂಡ ಪ್ರಸಂಗಗಳೂ ಸಾಕಷ್ಟಿದ್ದುವು. ಇತ್ತ, ತಮ್ಮ ಬಾಲ್ಯ ಹಾಗೂ

ತಾರುಣ್ಯದ ದಿನಗಳ ಕಷ್ಟಕಾಲದಲ್ಲಿ ಉಪಕರಿಸಿದವರ ಋಣಸಲ್ಲಿಕೆಗಂತೂ ಚಿಮ್ಮಲಗಿಯವರು ಬಹುದೂರದವರೆಗೂ ಹೋದದ್ದಿದೆ. ಇವಾರತಿ ಗೋವಿಂದರಾವ ಎಂಬ ಹೈದರಾಬಾದಸ್ಥರು, ಚಿಮ್ಮಲಗಿಯವರು ಪೋಲೀಸ ಖಾತೆಯಲ್ಲಿರುವಾಗ ಒಂದಿಷ್ಟು ನೆರವಾಗಿದ್ದರು. ಗೋವಿಂದರಾಯರು ಕೆಲಸ ಮಾಡುತ್ತಿದ್ದ ಅಂಗಡಿಯಲ್ಲಿ ಹಣದ 'ಅಫರಾ-ತಫರಾ' ಆಗಿ, ರಾಯರ ಹೆಸರನ್ನು ಸಿಕ್ಕಿಸಲಾಯಿತು. ಪೋಲೀಸ್ ವಾರೆಂಟ್ ಹೊರಳಿತು. ಮುಂದಿನ ದಾರಿ ತೋಚದೆ ಗೋವಿಂದರಾಯರು ಫರಾರಿಯಾದರು. ಚಿಮ್ಮಲಗಿಯವರೊಬ್ಬರಿಗೆ ಮಾತ್ರ ಅವರ ಗುಪ್ತ ನಿವಾಸ ಗೊತ್ತಿತ್ತು. ಗೋವಿಂದರಾಯರ ದೊಡ್ಡ ಕುಟುಂಬದ ಭಾರವನ್ನು ಹಲವಾರು ತಿಂಗಳು ವಹಿಸಿದರಲ್ಲದೆ, ವಾರಂಟಿನ ಸದ್ದು ಅಡಗಿದ ಮೇಲೆ, ಆ ಗುಪ್ತ ಸ್ಥಳಕ್ಕೇನೆ ಕುಟುಂಬದವರನ್ನು ಸಾಗಿಸಿದರು. ಮುಂದೆ ಚಿಮ್ಮಲಗಿಯವರ ಸಲಹೆಯ ಮೇರೆಗೆ ಗೋವಿಂದರಾಯರು ಸರಕಾರದ ಕ್ಷಮೆಯನ್ನು ಮಾಡಿಸಿದರು. ಜೊತೆಗೆ ತಮ್ಮ ಪೂರ್ವಪರಿಚಯದ ಆಸರೆ ಪಡೆದು, ಚಿಮ್ಮಲಗಿಯವರು ಪೋಲೀಸ ಅಧಿಕಾರಿಗಳಿಗೆ ಹೇಳಿರಲೂ ಸಾಕು, ಅಂತೂ ವಾರಂಟು ರದ್ದಾಯಿತು. ಮತ್ತು ಗೋವಿಂದರಾಯರು ಸಕುಟುಂಬ ಹೈದರಾಬಾದಿನಲ್ಲಿ ಪುನಃ ನೆಲಸುವಂತಾಯ್ತು.

ಮಕ್ಕಳು ದೊಡ್ಡವರಾಗಿ ವ್ಯವಹಾರವನ್ನು ಸ್ವತಂತ್ರವಾಗಿ ನೋಡಿಕೊಳ್ಳತೊಡಗಿದಾಗ ಚಿಮ್ಮಲಗಿಯವರಿಗೆ ೬೦ನೆಯ ವರ್ಷ ಸಮೀಪಿಸಿತ್ತು. ಅದೇ ತಾನೇ ಪೋಲೀಸ್ ಆಚರಣೆ ನಡೆದು ಹೈದರಾಬಾದ ಸಂಸ್ಥಾನವು ಭಾರತದ ಒಕ್ಕೂಟದಲ್ಲಿ ಸೇರಿದ್ದಿತು. ಅದರ ಮರುವರ್ಷ ಎಂದರೆ ೧೯೪೯ರಲ್ಲಿ ಚಿಮ್ಮಲಗಿಯವರ ಷಷ್ಟ್ಯಬ್ದಿ ಸಮಾರಂಭ. ಶಾಂತಿ ಹೋಮ, ತುಲಾಭಾರ ಮುಂತಾದವು ವಿಜೃಂಭಣೆಯಿಂದ ಜರುಗಿದುವು. ಅನೇಕ ಗಣ್ಯರು, ಪ್ರತಿಷ್ಠಿತರು ಆಗಮಿಸಿದ್ದರು. ವಿಚಿತ್ರವೆಂದರೆ ಅವರೇ ಜನ್ಮವಿತ್ತಿದ್ದ ನೃಪತುಂಗ ವಿದ್ಯಾಲಯದ, ಅದರಂತೆ ಕರ್ನಾಟಕ ಸಾಹಿತ್ಯ ಮಂದಿರದ ಆಗಿನ ಪದಾಧಿಕಾರಿಗಳು, ಒಂದು ಸಣ್ಣ ಸಭೆಯನ್ನಾದರೂ ಕರೆದು ಇವರ ಷಷ್ಟ್ಯಬ್ದಿಯನ್ನು ಆಚರಿಸಬಹುದಿತ್ತು. ಅವರ ಮನೆಯಲ್ಲಿಯೆ ಆ ಸಮಾರಂಭ ನಡೆದಾಗ ಒಂದು ಹಾರವನ್ನಾದರೂ ಅರ್ಪಿಸಬಹುದಾಗಿತ್ತು. ಇದಾವುದನ್ನೂ ಮಾಡಲಿಲ್ಲ.

ಇನ್ನೂ ವಿಚಿತ್ರವೆಂದರೆ, ಯಾರೊಟ್ಟಿಗೆ ಚಿಮ್ಮಲಗಿಯವರು ಸೆಣಸಿ, ನೃಪತುಂಗ ವಿದ್ಯಾಲಯವನ್ನು ಸ್ಥಾಪಿಸಿದ್ದರೋ ಆ ವಾಮನ ನಾಯಕರು ಸಕ್ರಿಯವಾಗಿ ಪಾಲ್ಗೊಂಡಿದ್ದರು! ಇದೇಕೆ ಹೀಗೆ?

ಕರ್ನಾಟಕದ ಏಳ್ಗೆಗಾಗಿ ಅಖಂಡವಾಗಿ ಶ್ರಮಿಸಿ, ನಾಡಿನ ಕುಲಪುರೋಹಿತರೆನಿಸಿದ ಆಲೂರ ವೆಂಕಟರಾಯರ ಕಾರ್ಯವನ್ನು ಅರಿಯದ ಕನ್ನಡಿಗರು ತೀರ ಕಡಿಮೆ. ಆದರೆ ಆ ರಂಗದಿಂದ ನಿವೃತ್ತರಾಗಿ, ಅವರು ಹಣ್ಣು ವಯಸ್ಸಿನಲ್ಲಿ ಧಾರವಾಡದಲ್ಲಿ ಅಸು ನೀಗಿದಾಗ ಅವರ ಅಂತ್ಯ ಸಂಸ್ಕಾರಕ್ಕೆ ಕೇವಲ ೫೦--೬೦ ಜನ ಬಂದಿದ್ದರು. ಅವರ ಮೂರನೆಯ ದಿನ, ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಸಂತಾಪಸೂಚಕ ಸಭೆಯನ್ನು ಏರ್ಪಡಿಸಲಾಗಿದ್ದಿತು. ಧ್ವನಿವರ್ಧಕದ ವ್ಯವಸ್ಥೆ ಇದ್ದಿತು. ಒಬ್ಬಿಬ್ಬರಲ್ಲ, ಒಂಭತ್ತು ಜನ ಹಿರಿಯ ಭಾಷಣಕಾರರಿದ್ದರು. ಕಾರ್ಯಕ್ರಮದ ಪ್ರಚಾರವನ್ನೂ ಸಾಕಷ್ಟು ಮಾಡಲಾಗಿದ್ದಿತು. ಆದರೆ ಸಭೆಗೆ ಬಂದವರು? ಕೇವಲ ೩೦ ಜನ-ಭಾಷಣಕಾರರನ್ನೊಳಗೊಂಡು! ಯಾವ ನಗರದಲ್ಲಿ ಆಲೂರ ವೆಂಕಟರಾಯರು ೬೦ ವರ್ಷ ನೆಲೆಸಿ, ಕನ್ನಡವನ್ನು ಸಂರಕ್ಷಿಸಿ, ಅಭಿವೃದ್ಧಿಗೊಳಿಸಿದರೋ ಅಲ್ಲಿ ಹೀಗೆ.

ಇಂಥ ಪರಿಸ್ಥಿತಿಯ ಕಾರಣಗಳು ಹಲವಾರು. ಆಲೂರರು ಸಾರ್ವಜನಿಕ ಜೀವನದಿಂದ ನಿವೃತ್ತರಾಗಿ ಆದಾಗಲೇ ೨೫–೩೦ ವರ್ಷಗಳಾಗಿದ್ದುವು. ಆ ಕಾಲಕ್ಕೆ ಇದ್ದ ಹೊಸ ಪೀಳಿಗೆಯವರಿಗೆ ಅವರ ಕಾರ್ಯದ ಅರಿವು ಇರಲಿಲ್ಲ. ಇನ್ನು ಹಳೆಯ ಪೀಳಿಗೆಯವರಾದರೂ ಬಂದು ಆಲೂರರಿಗೆ ಗೌರವ ಸೂಚಿಸಬಹುದಿತ್ತು. ಆದರೇನು ಕಾಲ ಗತಿಸಿದಂತೆ, ಹಿಂದಿನವರು ಮಾಡಿದ ಕಾರ್ಯದ ಮರವೆಯಾಗುತ್ತದೆ. ಆ ವ್ಯಕ್ತಿಯ ಬಗ್ಗೆ ಅಲಕ್ಷ್ಯ ಹುಟ್ಟುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಆಲೂರರು ಮರಣಪೂರ್ವದಲ್ಲಿ ಯಾವ ಅಧಿಕಾರ ಸ್ಥಾನವನ್ನೂ ಹೊಂದಿರಲಿಲ್ಲವಷ್ಟೆ. ಯಾವದೊಂದು ಪ್ರದೇಶದ ಓರ್ವ ಯಃಕಶ್ಚಿತ ಎಂ.ಎಲ್.ಎ. ಮರಣ ಹೊಂದಿದರೂ ಸಹಿತ ಇದಕ್ಕೂ ಹೆಚ್ಚಿನ ಪ್ರತಿಕ್ರಿಯೆ ಕಂಡುಬರಬಹುದಿತ್ತು....

ಚಿಮ್ಮಲಗಿಯವರ ಷಷ್ಟ್ಯಬ್ದಿಯ ಬಗ್ಗೆ, ಅವರು ಪೋಷಿಸಿದ ಸಂಸ್ಥೆಗಳ

ವರು ಅಲಕ್ಷ್ಯ ತೋರಿದ್ದರ ಹಿನ್ನೆಲೆಯಾದರೂ ಇದೇ ಬಗೆಯದೆನ್ನಬೇಕು. ಜೊತೆಗೆ ಇನ್ನೆರಡು ಅಂಶಗಳೂ ಇವೆ. ಯಾರೊಬ್ಬರು ಸಾರ್ವಜನಿಕ ಕ್ಷೇತ್ರ ದಲ್ಲಿ ವಿಶೇಷ ಕೆಲಸ ಮಾಡಿ ಕೀರ್ತಿಭಾಜನರಾದರೆ, ಅವರನ್ನು ಹಿಂದೆಳೆಯುವ ಮತ್ತು ಹೀಗಳೆಯುವ ಸಾಧ್ಯವಾದರೆ ಅವರ ಚಾರಿತ್ರ್ಯವಧೆಗೂ ಯತ್ನಿಸುವ ಪ್ರವೃತ್ತಿಯುಳ್ಳ ಜನ ಎಲ್ಲ ಕಡೆಗೂ ಇರುತ್ತಾರೆ. ಹಾಗೆ ಮಾಡುತ್ತ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಇಂಥವರನ್ನು ಎದುರಿಸುವುದಕ್ಕೆ ಒಂದು ಬಗೆಯ ಭಂಡತನ ಬೇಕಾಗುತ್ತದೆ. ಈ ಗುಣವನ್ನು ಇಂದಿನ ಪ್ರತಿಯೋರ್ವ ರಾಜಕಾರಣಿಯಲ್ಲಿ ಅದರಂತೆ ಕೆಲವು ಸಾಹಿತಿಗಳಲ್ಲಿಯೂ ಕಾಣುತ್ತ ಇದ್ದೇವೆ. ಚಿಮ್ಮಲಗಿಯವರಲ್ಲಿ ಆ ಗುಣವಿಶೇಷ ಇರಲಿಲ್ಲ. ಅವರು ಜಾತ್ಯತಃ ಗಟ್ಟಿಗ ರಾದರೂ ಸೂಕ್ಷ್ಮಮನಸ್ಸಿನವರು*, ವಿರೋಧೀ ಪ್ರಸಂಗಗಳು ಹೊರಗಿನ ಪರಿಸರಗಳಿಂದ ಬಂದದ್ದಾದರೆ ಬಲವಾಗಿ ಎದುರಿಸ ಸಮರ್ಥರು, ಹಾಗೆ ಮಾಡಿಯೂ ಇದ್ದಾರೆ. ಆದರೆ ತಮ್ಮವರೇ ವಿರೋಧ ಮಾಡಿದಾಗ? ಚಿಮ್ಮ ಲಗಿಯವರು ಒಳಗೇ ಕುದಿದು ಹಿಂದೆ ಸರಿಯುವವರಾಗಿದ್ದರು. ಇವರ ಜೊತೆಗೆ, ತಾವು ವಿದ್ಯಾವಂತರೆನಿಸಿರದಿದ್ದ ಸ್ವಂತದ ನೈಚ್ಯಾನುಸಂಧಾನವೂ 'ಹೋ, ಇವರು ಹೇಳಿ ಕೇಳಿ ವ್ಯಾಪಾರಿಗಳು' ಎಂಬ ಜನರ ಲಘು ಮಾತೂ ಸೇರಿರಬೇಕು. ಚಿಮ್ಮಲಗಿಯವರು ವಿದ್ಯಾರ್ಜನೆಗಾಗಿ ಒದ್ದಾಡಿದ ಬಗೆಯನ್ನು ನೋಡಿದ್ದೇವೆ. ಅದು ಹಾಗಿರಲಿ, ಹೈದರಾಬಾದಿನಲ್ಲಿ ಸಾವಿರಾರು ಜನರು ವಿದ್ಯೆಯನ್ನು ಕಲಿಯುವುದಕ್ಕೆ ಹಾದಿ ಹಾಕಿಕೊಟ್ಟರಲ್ಲ ? ಅವರು ವ್ಯಾಪಾರಿ ಗಳು ಹೌದು ; ಆದರೆ ಆ ಹಣದ ಸದ್ವಿನಿಯೋಗವಾದದ್ದನ್ನು ಕಡೆಗಣಿಸುವ

---

*ಅವರು ಸೂಕ್ಷ್ಮಾಭಿಮಾನಿಗಳಿದ್ದರೆನ್ನುವುದಕ್ಕೆ ಇದೊಂದು ಸಣ್ಣ ನಿದರ್ಶನ. ತಮ್ಮ ತಮ್ಮನ ಮಗಳ ಮದುವೆಯ ಕಾಲಕ್ಕೆ ಚಿಮ್ಮಲಗಿಯವರು ಆಭರಣ ಹಾಕುವ ಕರಾರು ಇದ್ದಿತು. ಅದರಂತೆ ಮಾಡಿಸಿಯಾಗಿತ್ತು. ಆಗ ಬೀಗರಲ್ಲಿ ಒಬ್ಬರು "ಒಪ್ಪಿಕೊಂಡದ್ದ ಕ್ಕಿಂತ ಅದರ ತೂಕ ಕಡಿಮೆ ಇದ್ದಂತೆ ಕಾಣಿಸ್ತದ" ಎಂದರಂತೆ. ಮದುವೆಯ ಹಂದರ ದಲ್ಲಿ ಇಂಥ ಮಾತುಗಳಿಗೆ ಏನು ಕೊರತೆ? ಅದು ಚಿಮ್ಮಲಗಿಯವರ ಕಿವಿಗೆ ಬಿತ್ತು. ಬಾಯಿಯಿಂದ ಏನೂ ಆಡಲಿಲ್ಲ, ಆದರೆ ಹಾಗೆ ಅಂದ ವ್ಯಕ್ತಿಯನ್ನೂ ಬೀಗರ ಪೈಕಿ ಒಬ್ಬಿಬ್ಬರನ್ನೂ ಬಲುಮೆಯಿಂದ ಕಾರಿನಲ್ಲಿ ಕರೆದೊಯ್ದು ಸರಾಫೀ ಅಂಗಡಿಯಲ್ಲಿ ಆಭರಣವನ್ನು ತೂಗಿಸಿ ತೋರಿಸಿದರಂತೆ !

ಕೃತಜ್ಞತೆ ಯಾರಿಗೂ ಬರಲಾಗದು. ಅವರು ವ್ಯಾಪಾರದಿಂದ ಗಳಿಸಿದ ಹಣದ ಎಷ್ಟೋ ಪಾಲನ್ನು ಕನ್ನಡಕ್ಕಾಗಿ ಮೀಸಲಿರಿಸಿದ್ದರಿಂದ ಹೈದರಾಬಾದಿನಲ್ಲಿ ಕನ್ನಡವು ನೆಲೆನಿಲ್ಲುವುದಕ್ಕೆ ಕಾರಣವಾಯಿತಲ್ಲವೆ ?

ಚಿಮ್ಮಲಗಿಯವರಿಗೆ ೭೦ನೆಯ ವಯಸ್ಸು ಸಮೀಪಿಸುತ್ತಿದ್ದ ಕಾಲದಲ್ಲಿ, ಇನ್ನೊಂದು ಸಾಹಿತ್ಯ ಸಮ್ಮೇಲನ ಹೊರನಾಡ ಕನ್ನಡಿಗರು, ಹೈದರಾಬಾದ ನಗರದಲ್ಲಿ ಜರುಗಿತು (೧೯೫೮). ದಿಲ್ಲಿಯಲ್ಲಿದ್ದ ಹೊರನಾಡ ಕನ್ನಡಿಗ ಎಚ್.ಎಸ್. ಪಾಟೀಲರು ಮತ್ತು ಹೈದರಾಬಾದದಲ್ಲಿಯೆ ಪ್ರೊಫೆಸರರಾಗಿದ್ದ ಎಚ್. ಬಿ. ಕುಲಕರ್ಣಿಯವರು ಅದರ ಪ್ರೋತಾರರು. ಕಾರ್ಯಕರ್ತರೆಲ್ಲ ಚಿಮ್ಮಲಗಿಯವರೇ ಸ್ವಾಗತಾಧ್ಯಕ್ಷರಾಗಬೇಕೆಂದು ಆಗ್ರಹಪಟ್ಟರು. "ನನ್ನ ಕಡೆಯಿಂದ ಏನೂ ಕೆಲಸವಾಗದು ; ಬೇಡ" ಎಂದರು ಚಿಮ್ಮಲಗಿಯವರು. "ಹಿರಿಯರು ನೀವು ; ಮಾರ್ಗದರ್ಶನ ಮಾಡಿದರೆ ಸಾಕು, ನಾವೆಲ್ಲ ಕೆಲಸ ನೋಡಿಕೊಳ್ಳುತ್ತೇವೆ" ಎಂದು ಆಶ್ವಾಸನವಿತ್ತುದ್ದರಿಂದ ಒಪ್ಪಿಕೊಂಡರು. ನಿಜಲಿಂಗಪ್ಪನವರು ಉದ್ಘಾಟಿಸಿದ ಮತ್ತು ದ.ಪ. ಕರಮರಕರರು ಅಧ್ಯಕ್ಷರಾಗಿದ್ದ ಆ ಸಮ್ಮೇಳನ ಯಶಸ್ವಿಯಾಯಿತು. 'ಅವರೇ (ಕಾರ್ಯಕರ್ತರು) ಎಲ್ಲ ಕೆಲಸ ಮಾಡಿದರು. ಉತ್ಸವಮೂರ್ತಿಯಂತೆ ಸುಮ್ಮನೆ ನನ್ನನ್ನು ಒಯ್ದು ಕೂರಿಸಿದರು' ಎಂದು ಬರೆದಿದ್ದಾರೆ ಚಿಮ್ಮಲಗಿಯವರು. ಆ ದಿನ ಅವರಿಗೆ, ತಾವು ಮೂವತ್ತು ವರ್ಷಗಳ ಹಿಂದೆ ನಡೆಸುತ್ತಿದ್ದ ಕನ್ನಡಿಗರ ಗಣೇಶೋತ್ಸವದ ದಿನಗಳು ನೆನಪಾದುವಂತೆ. ಜನರನ್ನು ಸೇರಿಸಲು ತಾವು ಆಗ ಒದ್ದಾಡುತ್ತಿದ್ದುದು ಕಣ್ಣಿಗೆ ಕಟ್ಟಿತು, ಈ ಸಮ್ಮೇಳನಕ್ಕೆ ಜನ ತಾವಾಗಿ ಬಹುಸಂಖ್ಯೆಯಲ್ಲಿ ನೆರೆದಿದ್ದನ್ನು ಕಂಡು ಹರ್ಷಿತರಾದರು.

ತಮ್ಮ ತುರೀಯಾಶ್ರಮದ ಅವಧಿಯಲ್ಲಿ ಚಿಮ್ಮಲಗಿಯವರು ಮಾಡಿದ ಒಂದು ಸಾಹಿತ್ಯಿಕ ಧರ್ಮಕಾರ್ಯವನ್ನು ಇಲ್ಲಿ ಪ್ರಸ್ತಾಪಿಸಬೇಕು. ಆಸ್ತಿಕ ಜನರಿಗೆ ಪಾರಾಯಣ ಮಾಡಲು ಅನುಕೂಲವಾಗುವಂತೆ ಕನ್ನಡ ಲಿಪಿಯಲ್ಲಿ ಭಾಗವತ ಸಾರೋದ್ಧಾರ, ಭಗವದ್ಗೀತಾ ಸಾರೋದ್ಧಾರ ಹಾಗೂ ಬೇರೆ ಕೆಲವು ಸ್ತೋತ್ರ ಪುಸ್ತಕಗಳನ್ನು ಅಚ್ಚುಹಾಕಿಸಿ ಪುಕ್ಕಟೆ ಹಂಚಿದರು. ಈ ಅವಧಿಯಲ್ಲಿ ಹಲವು ಬಾರಿ ತೀರ್ಥಯಾತ್ರೆ ಮಾಡಿಬಂದರು. ಅದರಿಂದ

ತುಂಬ ಸಂತೃಪ್ತಿಯನ್ನು ಹೊಂದಿದರು. ಅವರ ೭೪ನೆಯ ವರ್ಷದಲ್ಲಿ ಅರ್ಧಾಂಗವಾಯುವಿನ ಬೇನೆ ಹೊಡೆಯಿತು. ಆದರೆ ೬-೭ ತಿಂಗಳಲ್ಲಿಯೆ ಚೇತರಿಸಿಕೊಂಡರು-ಮೊದಲಿನಷ್ಟು ದೈಹಿಕ ಶಕ್ತಿ ಉಳಿದಿರಲಿಲ್ಲ. ಇನ್ನೂ ಅಷ್ಟು ದಾನ-ಧರ್ಮ ಮಾಡಬೇಕೆಂದು ಸಂಕಲ್ಪಿಸಿದರು. ಅದರಲ್ಲಿ ಎದ್ದು ಕಾಣುವಂಥದ್ದೆಂದರೆ ನೃಪತುಂಗ ವಿದ್ಯಾಲಯದ ಲೈಬ್ರರಿ ಕಟ್ಟಡಕ್ಕಾಗಿ ಆರು ಸಾವಿರ ರೂ.ಗಳನ್ನು ಕೊಟ್ಟದ್ದು (೧೯೬೬). ಹಲವಾರು ಧಾರ್ಮಿಕ ಸಂಸ್ಥೆಗಳಿಗೂ ಅವರು ಧಾರಾಳವಾಗಿ ದಾನಮಾಡಿದರು. ದಾಸಕೂಟದಲ್ಲಿ ಮೊದಲಿನಿಂದಲೂ ಅವರಿಗೆ ಆಸ್ಥೆ ಇದ್ದಿತು. ದಾಸ ಸಾಹಿತ್ಯದ ಪ್ರಕಟನೆಗೆಂದು ಠೇವಣಿ ಇಟ್ಟು ಅದರ ಬಡ್ಡಿಯ ಹಣದಿಂದ ಪ್ರತಿವರ್ಷವೂ ಆರ್ಥಿಕ ಸಹಾಯ ಒದಗಿಸಿದರು. ಅವರ ಕೊನೆಗಾಲದ ಟಿಪ್ಪಣಿಗಳಲ್ಲಿ ಹಾಗೆ ದಾನ ಪಡೆದ ಸಂಸ್ಥೆಗಳ ಯಾದಿ ಇದ್ದು, ಧಾರೆಯೆರೆದ ಹಣವು ಇಪ್ಪತ್ತು ಸಾವಿರದಷ್ಟಿದೆ.

ಮತ್ತೊಮ್ಮೆ ಪಾರ್ಶ್ವವಾಯು ಹೊಡೆದಾಗ ಮಾತ್ರ ಅವರಿಗೆ ಚೇತರಿಸಿಕೊಳ್ಳಲಾಗಲಿಲ್ಲ. ಆಗಸ್ಟ ೨೭, ೧೯೭೩ ರಂದು ಇಹಲೋಕವನ್ನು ತ್ಯಜಿಸಿದರು. ಅಂದಿಗೆ ಅರ್ಧದಶಕದ ಹಿಂದೆ ಹೈದರಾಬಾದಿನಲ್ಲಿ ಕನ್ನಡವು ಅನಾಥವಾಗಿದ್ದಾಗ ಎತ್ತಿಹಿಡಿದರು. ಕನ್ನಡದ ಸೆಲೆ ಬತ್ತಿಹೋದಾಗ ಚಾಲನೆ ಕೊಟ್ಟರು. ತಮ್ಮ ಸಂಪತ್ತನ್ನು ಕನ್ನಡದ ಕಾರ್ಯಕ್ಕೆಂದು ಮೀಸಲಿರಿಸಿದರು. ಪ್ರಸಿದ್ಧಿ, ಅಧಿಕಾರ ಮೊದಲಾದ ಪ್ರಲೋಭನೆಗಳಿಗೆ ಒಳಗಾಗದೇ, ಇತರರು ಮುಂದೆ ಬಂದಾಗ, ಅವಕಾಶ ಮಾಡಿಕೊಟ್ಟರು. ಕನ್ನಡವನ್ನುದ್ಧರಿಸಿದ ಹಳೆಯ ತಲೆಮಾರಿನ ಪುಣ್ಯಪುರುಷರ ಮಾಲಿಕೆಯಲ್ಲಿ ಸೇರಿಕೊಂಡರು.



ಮಿತ್ರರಾದ ಡಾ. ಶ್ರೀನಿವಾಸ ಹಾವನೂರ ಅವರು ದಿ. ಬಿ. ಜಿ. ಚಿಮ್ಮಲಗಿಯವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಒದಗಿಸಿ ಒಬ್ಬ ಸಾಹಸೀ ಕನ್ನಡಿಗನ ಸೇವೆಯ ವಿವರಗಳನ್ನು ಬೆಳಕಿಗೆ ತಂದಿದ್ದಾರೆ...

ಹೈದರಾಬಾದಿನಲ್ಲಿ ಕನ್ನಡದ ಹೆಸರೇ ನಿಲ್ಲದಿದ್ದಾಗ ನೃಪತುಂಗ ಶಾಲೆ ಕನ್ನಡ ಸಾಹಿತ್ಯ ಮಂದಿರ, ನಾಡಹಬ್ಬಗಳ ಏರ್ಪಾಡು ಇಂಥವನ್ನೆಲ್ಲ ಆರಂಭಿಸಿ ಬೆಳೆಸಿ ಕನ್ನಡಕ್ಕೆ ನೆಲೆ ಕಟ್ಟಿಸಿದುದಲ್ಲದೆ ಕನ್ನಡಿಗರಲ್ಲಿ ಜಾಗ್ರತಿಯುಂಟಾಗುವಂತೆ ಮಾಡಿದ ಕೀರ್ತಿ ಮೊದಲು ಚಿಮ್ಮಲಗಿಯವರಿಗೆ ಸಲ್ಲುತ್ತದೆ......

ಇತಿಹಾಸದ ಸರಪಳಿಯನ್ನು ಸರಿಯಾಗಿ ಜೋಡಿಸುವ ಇಂಥ ಉಪಯುಕ್ತ ಕೃತಿಯನ್ನು ನೀಡಿದ ಸಂಶೋಧಕ ಮಿತ್ರ ಡಾ. ಹಾವನೂರ ಅವರಿಗೆ ಅಭಿನಂದನೆ ಸಲ್ಲಿಸುತ್ತೇನೆ.

**ಜಯತೀರ್ಥ ರಾಜಪುರೋಹಿತ**
ಐ.ಎ.ಎಸ್.
-(ಮೊದಲ ಮಾತು)